# ಉಂಗುರದ ಗುಲಾಮ

ಎಸ್ ಪಿ ಅಜಿತಪ್ರಸಾದ್



ಯುಗಪುರುಷ ಗ್ರಂಥಮಾಲೆ : ೨೫೧

# ಉಂಗುರದ ಗುಲಾಮ

ಎಸ್. ಪಿ. ಅಜಿತ್‌ಪ್ರಸಾದ್.

ಪ್ರಕಾಶನ :

ಯುಗಪುರುಷ ಪ್ರಕಟಣಾಲಯ,
ಕಿನ್ನಿಗೋಳಿ - ೫೭೪ ೧೫೦, ದ. ಕ.

1989

**UNGURA-DA-GULAMA - A Short Novel written by S. P. Ajith Prasad. Lecturer and Head of the Dept. in Kannada, Sri Dhavala College. Moodbidri - 574 227 D. K.**

19೮೭ - 1,000



Price : Rs. 10-00

ವಿನ್ಯಾಸ ಮತ್ತು ಕಲೆ : ವೇಣು.

Printers & Publisher

Yugapurusha Mudranalaya
Kinnigoli-574 150, D. K.

# ಪ್ರಕಾಶಕರ ಮಾತು

'ನಹಿ ಸರ್ವಂ ವಿಜಾನಾತಿ' ಎಲ್ಲವನ್ನೂ ಬಲ್ಲವನು ಯಾರೊಬ್ಬನೂ ಇಲ್ಲ. ಆದರೂ ತಿಳಿಯುವ ಬಲು ಹಂಬಲ ಹಾಗೂ ಹಿರಿ ಹುಮ್ಮಸ್ಸು ಇದ್ದಲ್ಲಿ ಇನ್ನಷ್ಟು ಮತ್ತಷ್ಟು ಬಲ್ಲವನಾಗಬೇಕೆಂಬ ತಿಳಿಯಾಸೆಗೆ ಸದವಕಾಶ ಎಲ್ಲದಿಲ್ಲ.

ಪ್ರಕೃತದ ಪರಿಸ್ಥಿತಿಯನ್ನು ಪರಿಶೀಲಿಸಿದಾಗ ಒಮ್ಮೆ ಪದವೀಧರರೋ ಇಲ್ಲ ಸ್ನಾತಕೋತ್ತರ ಪದವೀಧರರೋ ಎನಿಸಿ ಬಿಟ್ಟರೆ ಮತ್ತೆ ಮೊಟ್ಟ ಮೊದಲು ಮಾಡುವ ಕೆಲಸ ಮತ್ತೆ ತಿಳಿಯಲಿಕ್ಕಿದೆಯೆಂಬ ಸಂಗತಿಯನ್ನು ಬಿಟ್ಟುಬಿಡುವುದು. ಅದರಲ್ಲೂ ಪ್ರಮುಖ ಸಂಸ್ಥೆಯೊಂದರಲ್ಲಿ ಉನ್ನತ ಸೇವಾವಕಾಶ ಲಭಿಸಿತೊ ಆಗ ಹೆಚ್ಚಿನವರು ಗೈಯುತ್ತಿರುವ ಪ್ರಥಮ ಪ್ರಾಶಸ್ತ್ಯದ ಕೆಲಸವೆಂದರೆ ಈ ಅಧ್ಯಯನ- ಅಧ್ಯಯವಸಾಯ ಪ್ರವೃತ್ತಿಗೆ ತಿಲಾಂಜಲಿಯನ್ನೀಯುವುದು.

ಈ ವಸ್ತುಸ್ಥಿತಿಗೆ ಅಪವಾದವೆಂಬಂತೆ ಶ್ರೀ ಅಜಿತ ಪ್ರಸಾದರಂತಹ ಉತ್ಸಾಹೀ ನವಯುವಕ ಲೇಖಕರಿಂದಾಗಿ ನಿರಾಶೆಯಲ್ಲೂ ಸದಾಶೆಯ ಹೊಂಬೆಳಗು ತಿಳಿ ತಿಳಿವನ್ನು ಹಾರೈಸುವವರಿಗೆ ಹುರುಪು ನೀಡುತ್ತವೆ.

ಶ್ರೀ ಅಜಿತ ಪ್ರಸಾದರ ಈ ದಿಶೆಯ ಉಲ್ಲಾಸ, ಉತ್ಸಾಹ ಇನ್ನಷ್ಟು ಮತ್ತಷ್ಟು ಸಂವರ್ಧಿಸಲಿ. "ಕವಲುಗಳು" ಕಾದಂಬರಿಯಿಂದ ಓದುಗರ ಮೆಚ್ಚುಗೆಯ ಮನ್ನಣೆಗಳಿಸಿರುವ ಶ್ರೀಯುತರ ಈ "ಉಂಗುರದ ಗುಲಾಮ" ಮತ್ತಷ್ಟು ವಾಚಕರಿಗೆ ಸ್ಫೂರ್ತಿಪ್ರದವಾಗಲಿ. ಈ ಸತ್ಕೃತಿಯ ಪ್ರಕಟಣೆಯ ದಿಶೆಯ ಸದವಕಾಶ ಕಲ್ಪಿಸಿದ ಶ್ರೀ ಅಜಿತ ಪ್ರಸಾದರಿಗೆ ಮತ್ತು ಅಂದವಾಗಿ ಮುದ್ರಿಸಿದ ಯುಗಪುರುಷದ ಬಳಗದವರೆಲ್ಲರಿಗೂ ಮುಖಪುಟದ ಮೆರುಗಿಗೆ ಕಳೆ ನೀಡಿರುವ ಕಲಾವಿದ ಶ್ರೀ ವೇಣು ಅವರಿಗೆ ಅಂತೆಯೇ ಈ ಮುಖಪುಟವನ್ನು ಅಚ್ಚುಕಟ್ಟಾಗಿ ಅಚ್ಚು ಮಾಡಿದ ಮಂಗಳೂರಿನ ಶಾರದಾ ಪ್ರೆಸ್ಸಿನವರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

7-4-1989,
ಕಿನ್ನಿಗೋಳಿ

ಕೊ. ಅ. ಉಡುಪ
ಸಂಪಾದಕ/ಪ್ರಕಾಶಕ

ಡಾ. ನಾ. ಮೊಗಸಾಲೆ

ಡಾ. ಕೆ. ವಿ. ನಾರಾಯಣ

ದಂಡಪ್ಪ

ವೇಣುಗೋಪಾಲ್

ಜಗದೀಶ್

ಟಿ. ಗೋವಿಂದ ರಾಜು

ಕೊ. ಅ. ಉಡುಪ

ಉದಯಕುಮಾರ್ ಇರ್ವತ್ತೂರು

ಧನಂಜಯ

ಕು. ರಾಜಶ್ರೀ

ಮತ್ತು

'ಕವಲುಗಳು' ಕೃತಿ ಕುರಿತಾಗಿ ಪತ್ರ ಬರೆದ ಹಿತೈಷಿಗಳಿಗೆ
ಹಾಗೂ ವಿಮರ್ಶಿಸಿದ ವಿವಿಧ ಪತ್ರಿಕೆಗಳ
ಸಂಪಾದಕರೂ ಮತ್ತು ವಿಮರ್ಶಕರಿಗೆ

—ಈ ಕೃತಿ ಬೆಳಕು ಕಾಣುತ್ತಿರುವ ಸಂದರ್ಭದ
ಆತ್ಮೀಯ ನೆನಕೆಗಳು.

# ಡಾ|| ನಾ. ಮೊಗಸಾಲೆಯವರ ಒಂದು ಪತ್ರ.

ಪ್ರೀತಿಯ ಅಜಿತ್‌ಪ್ರಸಾದ್,

ಸುಮಾರು ನಾಲ್ಕೈದು ವರುಷಗಳ ಹಿಂದಿನ ಮಾತು. ನಾನು ಮೂಡಬಿದಿರೆಯ ಸಾಹಿತ್ಯ ಕಾರ್ಯಕ್ರಮವೊಂದರಲ್ಲಿ ಮುಖ್ಯ ಭಾಷಣಕಾರನಾಗಿ ಭಾಗವಹಿಸಿದ್ದೆ. ಸಮಾರಂಭ ಮುಗಿದ ಮೇಲೆ ನೀವಾಗಿಯೇ ನಾನಿದ್ದಲ್ಲಿಗೆ ಬಂದು ಸ್ವಪರಿಚಯ ಮಾಡಿಕೊಂಡು ನಾನು ಭಾಷಣದಲ್ಲಿ ಎತ್ತಿದ ಪ್ರಶ್ನೆಗಳ ಬಗ್ಗೆ ಚರ್ಚಿಸಲು ಬಯಸಿದಿರಿ. ಖುಷಿಯಿಂದ ನಿಮ್ಮ ಜೊತೆ ಒಂದರ್ಧ ಗಂಟೆ ಕಳೆದ ನೆನಪು. ನಿಮಗಾಗ ಮೂಡಬಿದಿರೆ ಹೊಸತು. ಹಾಗೇ ಪ್ರಾಧ್ಯಾಪಕ ವೃತ್ತಿಯೂ ಕೂಡಾ. ನಿಮ್ಮ ಲವಲವಿಕೆ, ಸಾಹಿತ್ಯೋತ್ಸಾಹ, ಅದರ ಹಿಂದೆ ಇದ್ದ ಇರಬಹುದಾದ ಶ್ರದ್ಧೆ ಕಾಳಜಿಗಳ ಬಗ್ಗೆ ನಾನು ಕುತೂಹಲಗೊಂಡೆ. ಆದರೆ ನೀವು ಸಾಹಿತ್ಯಿಕ ಚಟುವಟಿಕೆಗಳಲ್ಲಿ ಹೆಚ್ಚು ತೊಡಗಿಸಿಕೊಂಡದ್ದನ್ನು ಆಮೇಲೆ ನಾನು ಕಾಣಲಾಗಲಿಲ್ಲ. ನಮ್ಮ ಭೆಟ್ಟಿ ಮತ್ತೆ ಮತ್ತೆ ಆದಾಗಲೆಲ್ಲ ನೀವು ನಿಸ್ತೇಜರಾಗಿರಲಿಲ್ಲ. ಆ ಸಮಾಧಾನವೊಂದೇ ನನಗಿದ್ದುದ್ದು. ಆದರೆ ಈಚೆಗೆ ನೀವು ಬರೆದ ಕಾದಂಬರಿ "ಕವಲುಗಳು"ನ್ನು ನೀವು ನನಗೆ ಪ್ರೀತಿಯಿಂದ ಕಳುಹಿಸಿಕೊಟ್ಟಾಗ ಖುಷಿಯಿಂದ, ಆಸಕ್ತಿಯಿಂದ ಓದಿದೆ; ನನಗೆ ಅನ್ನಿಸಿದ್ದನ್ನು ಬರೆದೆ. ಅದಕ್ಕೂ ಮೌನಿಯೇ. ಈಗ ಮತ್ತೆ ಒಂದು ಕಾದಂಬರಿ ಬರೆದಿದ್ದೇನೆಂದೂ ಅದಕ್ಕೆ ನಾನೇ ಮುನ್ನುಡಿಸಬೇಕೆಂದೂ ನೀವು ಬರೆದಾಗ ನಿಮ್ಮ ಪ್ರೀತಿಗಾಗಿ ಒಲ್ಲೆ ಎನ್ನಲಾಗಲಿಲ್ಲ. ಜೊತೆಗೆ ನಿಮ್ಮಂತಹ ತರುಣರು ಯಾವ ಸದ್ದು ಗದ್ದಲವೂ ಇಲ್ಲದೆ ಸೃಜನಶೀಲತೆಯಲ್ಲಿ ಒಳಗೊಳ್ಳುತ್ತಿರುವಾಗ ಸಹಜವಾಗಿಯೇ ಆಗುವ ಸಂತೋಷದಿಂದ ಈ ಕೆಲಸ ಮಾಡುತ್ತಿದ್ದೇನೆ.

ನಿಮ್ಮ 'ಉಂಗುರದ ಗುಲಾಮ' ನನ್ನ ಕೈಸೇರಿದ ಮೇಲೆ ನನ್ನ ಮುಂದೆ ಮುನ್ನುಡಿ ಹೇಗಿರಬೇಕು ಎಂಬ ಪ್ರಶ್ನೆ ಧುತ್ತೆಂದು ಎದ್ದು ಬಂತು. ಈಗಾಗಲೇ ನಾನು ನಾಲ್ಕಾರು ಮಂದಿಗೆ ಮುನ್ನುಡಿಯೋ ಆಶಯವೋ

ಅಂತ ಬರೆದದ್ದು ನಿಜ. ಆದರೆ ಅಭ್ಯಾಸಯೋಗ್ಯವಾದ ಒಂದು ಕೃತಿಗೆ ಮುನ್ನುಡಿ ಬರೆಯುವುದು ಇದೇ ಮೊದಲು. ಹಾಗಾಗಿಯೇ ನನ್ನಲ್ಲಿ ಎದ್ದ ಪ್ರಶ್ನೆ ಸಹಜವೇ. ಕಾರಣ—ಬಹಳ ವರುಷಗಳ ಹಿಂದೆ (ನವೋದಯ ಅಥವಾ ಪ್ರಗತಿಶೀಲರ ಕಾಲದಲ್ಲಿ) ಮುನ್ನುಡಿ ಅಂದರೆ ಒಂದು ರೀತಿಯ ಶುಭಾಶಯ ಇಲ್ಲವೇ ಆಶೀರ್ವಾದ ಅನ್ನುವ ಭಾವನೆ ಇತ್ತು. ಸಹಜವಾಗಿಯೇ ಇದನ್ನು ಹಿರಿಯ ಲೇಖಕರು ಕಿರಿಯರಿಗೆ ಮಾಡುತ್ತಿದ್ದರು. ಆಮೇಲೆ ನವ್ಯ ಸಾಹಿತ್ಯದ ಕಾಲ ಬಂತಲ್ಲ—ಆ ಸಮಯದಲ್ಲಿ ಮುನ್ನುಡಿ ಎಂಬುದು ಆ ಕೃತಿಯ ಪ್ರವೇಶಿಕೆಯಾಗಿಯೋ ಅಥವಾ ಸಮೀಕ್ಷೆಯಾಗಿಯೋ ರೂಪು ತಳೆಯಿತು. ಕಿರಿಯರೂ ಹಿರಿಯರಿಗೆ ಈ ಕೆಲಸ ಮಾಡಿದ್ದುಂಟು. ಅನಂತಮೂರ್ತಿ, ಕಂಬಾರ, ಲಕ್ಷ್ಮೀನಾರಾಯಣ ಭಟ್ಟರಂಥವರು ಅಡಿಗರಿಗೆ, ಡಾ|| ಹಾ. ಮಾ. ನಾ. ರಂಥವರು ಗೋರೂರರಿಗೆ ಮುನ್ನುಡಿಸಿದ್ದು ನಾನು ಬಲ್ಲೆ. ಈಚೆಗೆ ಕೆಲವರು ಮುನ್ನುಡಿಯ ನೆಪದಲ್ಲಿ ಕೃತಿಯ ಬಗ್ಗೆ ಕೊನೆಗೆ ಒಂದು ಪ್ಯಾರಾ ಹೇಳಿ ಉಳಿದ ಭಾಗವನ್ನು ಸಾಹಿತ್ಯಿಕ ಚರ್ಚೆಗೆ ಅಥವಾ ತಮ್ಮ ತೆವಲು ತೀರಿಸಿಕೊಳ್ಳುವುದಕ್ಕೆ ಉಪಯೋಗಿಸಿದ್ದೂ ಇಲ್ಲದೆ ಇಲ್ಲ. ಹೀಗೆ ಕನ್ನಡದಲ್ಲಿ ಮುನ್ನುಡಿ ಸಾಹಿತ್ಯವೂ ಸಮೃದ್ಧವಾಗಿದ್ದು ಕೆಲವು ಹಿರಿಯರ ಮುನ್ನುಡಿಗಳ ಸಂಗ್ರಹವೂ ಪುಸ್ತಕ ರೂಪದಲ್ಲಿ ಹೊರ ಬಂದಿರುವುದು ನೀವು ಬಲ್ಲ ಸಂಗತಿ. ಈ ಹಿನ್ನೆಲೆಯಲ್ಲಿ ನಾನು ಯಾವ ಮಾರ್ಗ ಅನುಸರಿಸಲಿ ಎಂಬುದೇ ನನ್ನ ಪ್ರಶ್ನೆ. ಯಾವುದಾದರೂ ಚಿಂತಿಲ್ಲ ಅಂತ ನೀವು ಹೇಳಬಹುದು ಆದರೂ ಲೇಖಕನಾದವನಿಗೆ ಇನ್ನೊಬ್ಬ ಲೇಖಕನಿಂದ ಶಹಭಾಸ್‌ಗಿರಿ ಗಿಟ್ಟಿಸುವುದು ಅಂದರೆ ಒಂದು ಕೃತಿ ಬರೆದಾಗ ಆಗುವಷ್ಟೇ ಸಂತೋಷದ ವಿಷಯ ಅನ್ನುವುದು ನನ್ನ ಅನುಭವ. ನಿಮ್ಮ ಕಾದಂಬರಿ ಓದಿದ ಮೇಲೆ ಕಣ್ಣು ಮುಚ್ಚಿ ಇದನ್ನು ಮೆಚ್ಚಿದ್ದೇನೆ ಅನ್ನಲೇಬೇಕು ನಾನು. ಹಾಗೆ ಬರೆದಿದ್ದೀರಿ ನೀವು. ಆದರೂ ನಾನು ವಿಮರ್ಶಕನಲ್ಲ ಎಂಬ ಎಚ್ಚರಿಕೆ ನನಗಿರುವುದರಿಂದ ಒಬ್ಬ ಒಳ್ಳೇ ಓದುಗನಾಗಿ ನಿಮ್ಮ ಓದು ನನಗೆ ಹೇಗೆ ಮುಟ್ಟಿತು ಎಂಬುದನ್ನು ಬಿಚ್ಚಿಕೊಳ್ಳಲಷ್ಟೇ ಈ ಬರಹವನ್ನು ಉಪಯೋಗಿಸಿಕೊಳ್ಳುತ್ತಿದ್ದೇನೆಯೇ ಹೊರತು ಖಂಡಿತ ಇದು ಮುನ್ನುಡಿ ಅಲ್ಲ; ಕೇವಲ ಒಂದು ಪತ್ರ ಅಂತ ಇಟ್ಟುಕೊಳ್ಳಿ.

ನಾವು ಬಲ್ಲಂತೆ ನಮ್ಮ ಅನುಭವಗಳನ್ನು ಹಂಚಿಕೊಳ್ಳಲು ಇರುವ ಏಕೈಕ ಮಾರ್ಗ ಅಂದರೆ ನಮಗೆ ಸಾಹಿತ್ಯವೊಂದೇ. ಸಾಹಿತ್ಯದಲ್ಲೂ ಈಗ ಅಗ್ರಸ್ಥಾನ ಕಾದಂಬರಿಗೇ, ಒಂದು ಕಾಲದಲ್ಲಿ ಕಾದಂಬರಿ ಅಂದರೆ ಹೀಗೇ ಇರಬೇಕು ಎಂಬ ಅಘೋಷಿತ ಸಂಪ್ರದಾಯ ಇತ್ತು. ಅದಕ್ಕೆ ಆದಿ, ಮಧ್ಯ ಅಂತ್ಯ, ಒಬ್ಬ ಕಥಾನಾಯಕ ನಾಯಕನಾದವನಿಗೆ ಧೀರೋದಾತ್ತ ಗುಣ, ಇತ್ಯಾದಿ. ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ ನಮ್ಮ ಜೀವನ ಮೌಲ್ಯಗಳ ಪ್ರತಿಪಾದನೆಗೆ ಸಾಹಿತ್ಯದ ಮೊರೆಹೊಕ್ಕದ್ದೂ ಇದೆ. ಈಗ ಕಾಲ ಬದಲಾಗಿದೆ. ಜೀವನ—ಮೌಲ್ಯಗಳೂ ಬದಲಾಗುತ್ತಿವೆ. ಒಬ್ಬನ ಜೀವನ ಮೌಲ್ಯ ಇನ್ನೊಬ್ಬನಿಗೆ ಅರ್ಥಹೀನ ಅಂತ ಈಗ ಅನ್ನಿಸಬಹುದು. ಕಾರಣ ದಿನದಿನಕ್ಕೆ ಯಾಂತ್ರಿಕೃತ ಮತ್ತು ಸಂಕೀರ್ಣವಾಗುತ್ತಿರುವ ನಮ್ಮ ಬದುಕಿಗೆ ನಾವೇ ಈಗ ಅರ್ಥ ಮೌಲ್ಯವನ್ನು ಹುಡುಕಬೇಕಾಗಿದೆ. ಈ ಹುಡುಕಾಟವು ಅನೇಕರಿಗೆ ಹುಡುಗಾಟದ ಹಾಗೆ ಕಂಡರೂ ಸಾಹಿತ್ಯದಲ್ಲಿ ಇನ್ನೂ ಇದಕ್ಕೆ ಅರ್ಥ ಇದೆ. ಅದ್ದರಿಂದಲೇ ನಮ್ಮಲ್ಲಿ ಅರ್ಥಪೂರ್ಣವಾದ ಕೃತಿಗಳೂ ಸಮರ್ಥ ಲೇಖಕರೂ ಹುಟ್ಟುತ್ತಿದ್ದಾರೆ.

ಈ ಹಿನ್ನೆಲೆಯಲ್ಲಿ ನಿಜವಾದ ಸೃಜನಶೀಲ ಬರೆಹಗಾರನಿಗೆ ಅರ್ಥಪೂರ್ಣವಾದ ಕೃತಿಯ ಬಯಕೆ ಸಹಜ. ಅರ್ಥಪೂರ್ಣವಾದದ್ದು ಎಂಬುದನ್ನು ಸರಳೀಕರಿಸಿ ಹೇಳುವುದಾದರೆ ಒಳ್ಳೆಯದ್ದು ಎಂದು ನಾವು ಹೇಳಬಹುದು. ಒಳ್ಳೆ ಸಾಹಿತ್ಯ ಅಂದರೆ ಶ್ರೇಷ್ಠ ಸಾಹಿತ್ಯ ಯಾವುದು? ಅದರ ಮಾನದಂಡ ಏನು ಎಂಬ ಪ್ರಶ್ನೆ ಹಿಂದೆಯೂ ಇತ್ತು. ಈಗಲೂ ಇದೆ. ಸಾಮಾನ್ಯವಾಗಿ ನಮ್ಮ ಜನಪ್ರಿಯ ಪತ್ರಿಕೆಗಳಲ್ಲಿ ಪ್ರಕಟವಾಗುವ ಕತೆ, ಕಾದಂಬರಿ, ಕಾವ್ಯಗಳನ್ನು ನಮ್ಮ ಜನಸಾಮಾನ್ಯರು ಖುಷಿಯಿಂದ ಓದಿ ಅದೇ ಒಳ್ಳೆ ಸಾಹಿತ್ಯ ಎಂದು ತಪ್ಪಾಗಿ ಅರ್ಥೈಸುವುದೂ ಉಂಟು. ಹೀಗಾಗಿ ಜನಪ್ರಿಯ ಸಾಹಿತ್ಯದ ಆಚೆ ಇನ್ನೊಂದು ಸಾಹಿತ್ಯ ಇದೆ ಎಂಬ ಅರಿವು ನಮ್ಮಲ್ಲಿ ಅನೇಕರಿಗೆ ಇಲ್ಲ. ಇದು ಅವರ ತಪ್ಪು ಅಲ್ಲ ಯಾಕೆಂದರೆ ಶ್ರೇಷ್ಠ ಕೃತಿಯ ಅನುಭವಗಳನ್ನು ಹಂಚಿಕೊಳ್ಳಬೇಕಾದರೆ ಓದುಗನಲ್ಲೂ ಪೂರ್ವಸಿದ್ಧತೆ ಬೇಕು. ಕೇವಲ ಓದಿಗಾಗಿ ಓದುವ ನಮ್ಮ ಜನಕ್ಕೆ ಈ

ಪೂರ್ವಸಿದ್ಧತೆಗೆ ಬಿಡುವೆಲ್ಲಿ? ಹಾಗಾಗಿ ನಮ್ಮ ನಡುವೆ ಇರಬೇಕಾದ ನಮ್ಮ ಕಾಲದ ಮಹತ್ವದ ಕೃತಿಗಳು ಕೆಲವೇ ಕೆಲವು ಮಂದಿಯ ಬೀರುಗಳಲ್ಲಿ ಭದ್ರವಾಗಿರುವುದು ಒಂದು ಸಾಹಿತ್ಯಕ ದುರಂತ.

ನಿಮ್ಮ ಕಾದಂಬರಿ 'ಉಂಗುರದ ಗುಲಾಮ' ಖಂಡಿತವಾದಿಯೂ ಜನಪ್ರಿಯ ಕೃತಿಯಲ್ಲ. ನಿಮ್ಮ ಓದಿನ ಬೀಸು ವಿಸ್ತಾರವಾಗಿರುವುದರಿಂದ ನೀವು ಮಹತ್ವದ ಕಡೆಗೆ ಮುಖ ಮಾಡಿದ್ದೀರಿ. ಒಮ್ಮೆ ಜನಪ್ರಿಯತೆಯ ಉಂಗುರದ ಗುಲಾಮನಾದರೆ ಅದರಿಂದ ಹೊರಬರುವುದು ಕಷ್ಟ. ನೀವು ಉಂಗುರದ ಗುಲಾಮರಾಗಿಲ್ಲ, ಎನ್ನುವುದೇ ನನಗೆ ನೀಡಿದ ಮೊದಲ ತೃಪ್ತಿ.

ನಮ್ಮ ಮಹತ್ವದ ಕೃತಿಗಳ ಓದು ಅನೇಕ ಸಲ ನಮ್ಮಂತವರಿಗೂ ಕಷ್ಟ ಅನ್ನಿಸಿದ್ದಿದೆ. ಯಾವುದೇ ಕೃತಿ ಸರಾಗವಾಗಿ ಓದಿಸಿಕೊಂಡು ಹೋಗಬೇಕಾಗಿರುವುದು ಅದರಲ್ಲಿರಬೇಕಾದ ಮೊದಲ ಗುಣ. ನಿಮ್ಮ ಈ ಕಾದಂಬರಿ ಈ ಆಶಯದಲ್ಲಿ ತುಂಬ ಯಶಸ್ವಿಯಾಗಿದೆ. ನಾನು ಒಂದೇ ಏಟಿಗೆ ಓದಿ ಮುಗಿಸಿದೆ. ಆಮೇಲೆ ಅದರ ಸೋಲು ಗೆಲುವಿನ ಬಗ್ಗೆ ಚಿಂತಿಸಿದೆ. ಚೆನ್ನಾಗಿ ಓದಿಸಿಕೊಂಡು ಹೋಗುವ ಜೊತೆ ಜೊತೆಗೆ ದಟ್ಟವಾದ ಜೀವನಾನುಭವವನ್ನು ಬಿಚ್ಚಿಕೊಳ್ಳಬೇಕಾದದ್ದು ಒಂದು ಒಳ್ಳೆ ಕೃತಿಯಲ್ಲಿರಬೇಕಾದ ಇನ್ನೊಂದು ಅಂಶ ಎಂದು ನನ್ನ ಅಂಬೋಣ. ಲಂಕೇಶರ "ಬಿರುಕು" ಕನ್ನಡದ ಒಂದು ಮಹತ್ವದ ಕೃತಿ ಎಲ್ಲ ಅರ್ಥದಲ್ಲಿ. ಆದರೆ ಅದರ ಓದು ಅಷ್ಟು ಸುಲಭದ್ದಲ್ಲ. ದೇವನೂರು ಮಹಾದೇವ ಅವರ "ಕುಸುಮ ಬಾ"ಲೆ ಇನ್ನೊಂದು ಮಹತ್ವದ ಕೃತಿ. ಆದರೆ ಅದು ಪ್ರಾದೇಶಿಕ ಜನಾಂಗೀಯ ಭಾಷೆಯಲ್ಲೇ ಬರೆಯಲ್ಪಟ್ಟಿರುವುದರಿಂದ ಅದರ ಮಹತ್ವ ನಮಗೆ ತಟ್ಟಲು ತುಂಬ ಶ್ರಮ ಬೇಕು. ಖ್ಯಾತ ವಿಮರ್ಶಕರೊಬ್ಬರು ಖಾಸಗಿಯಾಗಿ ನನ್ನಲ್ಲಿ ಹೇಳಿದ ಹಾಗೆ ಅದನ್ನು ಕನ್ನಡಾನುವಾದ ಮಾಡಬೇಕಾಗಿದೆ ಇಂಥಾದ್ದೇ ಇನ್ನೊಂದು ಮಹತ್ವದ ಕೃತಿ ಚೆನ್ನಣ್ಣ ವಾಲೀಕಾರರ 'ಬೆಳ್ಳಿ ಎಂಬ ಕಾದಂಬರಿ. ಸುಮಾರು ಹತ್ತು ಹದಿನೈದು ವರುಷದ ಹಿಂದೆಯೇ ಪ್ರಕಟವಾಗಿದ್ದರೂ ಅದು ಪ್ರಾದೇಶಿಕ ಜನಾಂಗೀಯ ಭಾಷೆಯಲ್ಲೇ ಬರೆಯಲ್ಪಟ್ಟಿದ್ದರಿಂದ, ಅದು ಯಾರ ಗಮನಕ್ಕೂ ಬಾರದೆ

ಹೋಯಿತು, ಇದರರ್ಥ ಗ್ರಾಂಥಿಕ ಭಾಷೆಯಲ್ಲೇ ಕೃತಿ ಇರಬೇಕು ಅಂತ
ನಾನು ಹೇಳುವುದಲ್ಲ. ಪ್ರಾದೇಶಿಕತೆಯ ಸೊಗಡಿನ ಬಗ್ಗೆ ನನ್ನಲ್ಲಿ ಗೌರವ
ಇದೆ, ಪ್ರೀತಿ ಇದೆ, ಆದರೆ ಅದು ಕೃತಿಯ ಆಸ್ವಾದನೆಗೆ ತೊಡಕಾಗಬಾರದು,
ಎಂಬುದೇ ನನ್ನ ಆಶಯ. ನೀವು ಪ್ರಾದೇಶಿಕತೆಗೆ ಒತ್ತು ಕೊಟ್ಟಿದರೂ
ಅದು ಎಲ್ಲೂ ತೊಡಕಾಗಿಲ್ಲ. ಪೂರಕವಾಗಿಯೇ ಬಂದಿರುವುದರಿಂದ ಅದು
ಕಾದಂಬರಿಗೆ ಸಹಜತೆ ಮತ್ತು ಸಫಲತೆಗೆ ದಾರಿ ಮಾಡಿಕೊಟ್ಟಿದೆ.

ಕಾದಂಬರಿಯ ಯಶಸ್ವಿಗೆ ಇರಬೇಕಾದ ಇನ್ನೊಂದು ಅಂಶ ಅದರ
ತಂತ್ರ. ಕೆಲವು ಸಲ ತಂತ್ರವೇ ಕಾದಂಬರಿಯ ವಸ್ತುವಾಗಿ ನಮ್ಮನ್ನು
ಗಾಢವಾಗಿ ತಟ್ಟಬಹುದು. ಅಥವಾ ತಂತ್ರವೇ ಕಾದಂಬರಿಯ ವಸ್ತುವಿನ
ಅವಿಭಾಜ್ಯ ಅಂಗವಾಗಲೂಬಹುದು. ಕಾರಂತರ "ಅಳಿದ ಮೇಲೆ"
"ಬೆಟ್ಟದ ಜೀವ" "ಮೈಮನಗಳ ಸುಳಿಯಲ್ಲಿ"ಯನ್ನು ನೋಡಿ. ಇಲ್ಲಿನ
ಈ ತಂತ್ರದಿಂದಾಗಿಯೇ ಕಾದಂಬರಿಗೆ ಮಹತ್ವ ಬಂದದ್ದು. ಹಾಗೇ
ಚಿತ್ತಾಲರ "ಶಿಕಾರಿ" "ಛೇದ"ವೂ ಕೂಡಾ ಪತ್ತೇದಾರಿ ಕಾದಂಬರಿಯ
ಹಾಗೆ ಮೊದಲ ನೋಟಕ್ಕೆ ಅನ್ನಿಸಿದರೂ ತಂತ್ರವು ಅಲ್ಲಿ ವಸ್ತುವಿನ ಅವಿಭಾಜ್ಯ
ಅಂಗವಾಗಿಯೇ ರೂಪುಗೊಂಡಿದೆ. ತೇಜಸ್ವಿಯವರ ಎರಡು ಕಾದಂಬರಿ
ಗಳಾದ "ಕರ್ವಾಲೊ" ಮತ್ತು "ಚಿದಂಬರ ರಹಸ್ಯ"ಗಳ ಮಹತ್ವ ಇರು
ವುದು ತಂತ್ರದಲ್ಲೇ. ಹೀಗೇ ನೀವೂ "ಉಂಗುರದ ಗುಲಾಮ"ದಲ್ಲಿ ಅಳ
ವಡಿಸಿದ ತಂತ್ರ ಸಫಲವಾಗಿದೆ, ಫ್ಯಾಂಟಸಿ - ಕನ್ನಡಕ್ಕೇನೂ ಹೊಸತಲ್ಲ.
ಅಥವಾ ಲೇಖಕ, ಓದುಗನನ್ನು ಇದಿರಿಟ್ಟುಕೊಂಡು ಬರೆಯುವುದೂ ನಮಗೆ
ಅಪರೂಪವಲ್ಲ. ಕನ್ನಡದ ಕಾದಂಬರಿಗಳ ಮೊದಲ ದಿನಗಳಲ್ಲಿ ಗಳಗನಾಥ
ರಂಥವರು ಇದನ್ನು ಆಗಲೇ ಮಾಡಿದ್ದಾರೆ. ಮತ್ತೆ ಲಂಕೇಶರೂ
"ಮುಸ್ಸಂಜೆಯ ಕಥಾ ಪ್ರಸಂಗ"ದಲ್ಲಿ ಇದಕ್ಕೆ ಹೊಸ ಆಯಾಮ ಕೊಟ್ಟಿ
ದ್ದಾರೆ. ನೀವು "ಪ್ರಿಯ ಓದುಗ" ಎಂಬ ಸಂಬೋಧನೆ ಇಲ್ಲದೆಯೂ
ಮತ್ತು ಕೊನೆಗೆ "ನಿನ್ನ ಪ್ರೀತಿಯ ಲೇಖಕ" ಎಂದು ಹೇಳದಿದ್ದರೂ ಚಿಂತಿರ
ಲಿಲ್ಲ. ಈ ಪತ್ರದ ದಾಟಿ ಇಲ್ಲದೆಯೂ ಕಾದಂಬರಿ ಸಹಜವಾಗಿಯೇ
ಓದುಗನ ಹತ್ತಿರಕ್ಕೆ ಬರುತ್ತದೆ.

ಇನ್ನು ನಾನು ಹೇಳಬೇಕಾದದ್ದು ನೀವು ಕಾದಂಬರಿಗೆ ಆರಿಸಿಕೊಂಡ ವಸ್ತು.

ನೀವು ನಾಯಕನೆಂದು ಕರೆಯುವ ಸೋಮಪ್ಪ ಅಥವಾ ಸೋಮ್ಯಾ ನನ್ನ ದೃಷ್ಟಿಯಲ್ಲಿ ಕಾದಂಬರಿಯ ನಾಯಕನಲ್ಲ; ಇಡೀ ಕಾದಂಬರಿಯೇ ವಸ್ತುವಿನೊಡನೆ ಅನ್ಯೋನ್ಯವಾಗಿದ್ದು ಅದರ ವಸ್ತುವೇ ನಾಯಕ ಸ್ಥಾನದಲ್ಲಿ ನಿಲ್ಲುತ್ತದೆ ಎಂದು ನಾನು ನಂಬುತ್ತೇನೆ. ಸೋಮಪ್ಪನನ್ನು ನಮ್ಮ ನಿಮ್ಮಂಥವರ ಅಥವಾ ದೀನದಲಿತರ ಪ್ರತೀಕವಾಗಿ ನೀವು ಚಿತ್ರಿಸಲು ಪ್ರಯತ್ನಿಸಿರುವುದು ಸಹಜ. ಆತನ ಹೆಸರಿನ ಹಿಂದೆ ಶ್ರೀ ಶ್ರೀ ಎಂಬ ವೈಭವೀಕರಣದ ವಿಡಂಬನೆ ಅರ್ಥಪೂರ್ಣ ಕೂಡಾ. ಅಂಥ ಸೋಮಪ್ಪ ನಮ್ಮೆಲ್ಲರ ಪ್ರತಿನಿಧಿಯಾಗಿ ನಮ್ಮ ಹಾಗೆ ಚೆನ್ನಾಗಿ ಬದುಕುವ ಕನಸು ಕಾಣುತ್ತಾನೆ. ಆತ ಎಂದೂ ಬಂಡೇಳುವ ಸ್ವಭಾವದವನಲ್ಲ. ಆದರೆ ಆತನೂ ಬಂಡಾಯದ ಕನಸು ಕಾಣುತ್ತಾನೆ. ಗೌಡನನ್ನು ಧಿಕ್ಕರಿಸಬೇಕು ಅಥವಾ ಈ ವ್ಯವಸ್ಥೆಯಿಂದ ಹೊರಬರಬೇಕು ಎಂಬ ಅವನ ಕನಸು ಈ ವ್ಯವಸ್ಥೆಯ ಆಕ್ಟೋಪಸ್ ಹಿಡಿತದಲ್ಲಿ ಎಂದೂ ನನಸಾಗದು. ಕೊನೆಗೂ ಆತನ ಕನಸು ನೆನಸಾಗುವುದು ಕನಸಿನ ಉಂಗುರದಲ್ಲಿ, ಅದೂ ಆಯಾಚಿತವಾಗಿ ಕನಸಿನ ಹಾಗೆ ಸಿಕ್ಕಿದ್ದರಿಂದ. ಆತ ಈ ವ್ಯವಸ್ಥೆಯಿಂದ ಉಂಗುರದ ಅದ್ಭುತ ಶಕ್ತಿಯಿಂದಾಗಿ ಹೊರ ಬಂದರೂ ಅದರಲ್ಲಿ ಅವನ ಸಾಧನೆ ಶೂನ್ಯ. ಹಾಗಾಗಿ ವ್ಯವಸ್ಥೆಯ ನಾಶಕ್ಕೆ ಸೋಮ್ಯಾ ಕಾರಣನಾಗದೆ ಗೌಡನೇ ಕಾರಣನಾಗುವುದು ಇಲ್ಲಿ ಗಮನಿಸಬೇಕಾದ ಅಂಶ. ಯಾವುದೇ ಒಂದು ವ್ಯವಸ್ಥೆ ತುತ್ತತುದಿಗೆ ತಲುಪಿದಾಗ ಅದು ಸ್ವಯಂನಾಶವಾಗುತ್ತದೆ ಎನ್ನುವುದು ನಮ್ಮ ಅನುಭವ. (ಡಾರ್ವಿನ್ನನ ವಿಕಾಸವಾದವೂ ಇದನ್ನು ಪುಷ್ಟೀಕರಿಸುತ್ತದೆ) ನಮ್ಮ ಪುರಾಣದ ಪ್ರಳಯ ಅಥವಾ ಅವತಾರಗಳ ಕಲ್ಪನೆಯ ಮೂಲಕ ರಾಕ್ಷಸ ಸಂಹಾರವೂ ಇದೇ ಇರಬಹುದೇನೋ! ರಾಕ್ಷಸರು ತಮ್ಮ ನಾಶಕ್ಕೆ ತಾವೇ ಕಾರಣರಾಗುತ್ತಾರೆ, ದೇವರು ಕೇವಲ ನಿಮಿತ್ತ ಮಾತ್ರ ಪ್ರತಿ 260 ವರ್ಷಗಳಿಗೊಮ್ಮೆ ಈ ಪ್ರಕೃತಿಯಲ್ಲಿ ಪ್ರಳಯ ಅರ್ಥಾತ್ ಬದಲಾವಣೆ ಆಗುತ್ತಿರುತ್ತದೆ ಎಂದು ಈಚೆಗೆ ಎಲ್ಲೋ ಓದಿದ ನೆನಪು ನನಗಿದೆ. ಇದೆಲ್ಲ ಯಾಕೆ ಹೇಳಿದ್ದೇನೆಂದರೆ ಒಂದು ವ್ಯವಸ್ಥೆ ನಾಶವಾಗಿ

ಮತ್ತೊಂದು ವ್ಯವಸ್ಥೆ ಉದಯಿಸಿದಾಗ ಆ ವ್ಯವಸ್ಥೆಯು ಕೂಡಾ ಹಿಂದಿನ ವ್ಯವಸ್ಥೆಯಂ ಹಾಗೆ ಕುಲಗೆಡುತ್ತಾ ಹೋಗುತ್ತದೆ ಅನ್ನುವುದಕ್ಕಾಗಿ, ಸೋಮಣ್ಣನೂ ಮಾಡಿದ್ದು ಹಾಗೇ. ಆತ ಗೌಡನ ದಾರಿಯನ್ನೇ ಹಿಡಿಯು ತ್ತಾನೆ, ಅಥವಾ ಗೌಡನೇ ಆಗುತ್ತಾನೆ ಇನ್ನೊಂದು ರೀತಿಯಲ್ಲಿ ಹೇಳುವು ದಾದರೆ ಫೀನಿಕ್ಸ್ ಹಕ್ಕಿಯಂ ಹಾಗೆ ತನ್ನನ್ನು ತಾನೇ ಸುಟ್ಟುಕೊಂಡ ಗೌಡ ಮತ್ತೆ ಅದೇ ಬೂದಿಯಿಂದ ಹುಟ್ಟುತ್ತಾನೆ ಸೋಮಪ್ಪನಾಗಿ. ಗೌಡ ಯಾರೆಲ್ಲ ದುರಾಚಾರ ಅತ್ಯಾಚಾರ ಅಹಂಕಾರಗಳಿಗೆಲ್ಲ ಮೂರ್ತಸ್ವರೂಪ ನಾಗಿದ್ದನೋ ಅದನ್ನೇ ಸೋಮಪ್ಪ ಭೂತದ ಮೂಲಕ ಪಡೆಯುತ್ತಾನೆ ಅಲ್ಲಿ ಸೋಮಪ್ಪ ನಮ್ಮೆಲ್ಲರ ಸಂಕೇತವಾಗುತ್ತಾನೆ, ನಾವೆಲ್ಲ ಹೇಗೆ ದ್ವಂದ್ವ ವ್ಯಕ್ತಿತ್ವ (Split personality) ಕ್ಕೆ ಗೊತ್ತಿದ್ದೊ ಗೊತ್ತಿಲ್ಲದೆಯೋ ಒಗ್ಗಿ ಕೊಂಡಿದ್ದೇವೆಯೋ ಹಾಗೆ ಸೋಮಯ್ಯನಿಗೂ ಅಧಿಕಾರ ಸಿಕ್ಕಾಗ ಹಿಂದಿನ ಎಲ್ಲ ಪರೌಲ್ಯಗಳ ಬಗ್ಗೆ ಕಾಳಜಿ ಇರುವುದಿಲ್ಲ. ಇದು ವಾಸ್ತವಿಕ ಕೂಡಾ, ಮತ್ತೆ ಈ ವ್ಯವಸ್ಥೆ ಶಿಖರಾವಸ್ಥೆ ಮುಟ್ಟುತ್ತದೆ, (ಶ್ರೀ ಶ್ರೀ ಸೋಮಪ್ಪ ನವರು ತಮ್ಮ ಹೆಂಡತಿ ಜೊತೆ ಸುಖವಾಗಿ ಸಂತೋಷವಾಗಿ..................... ಕಾಲ ಕಳೆದರು.) ಆಗ ಈ ವ್ಯವಸ್ಥೆಯಂ ನಾಶವಾಗಬೇಕು. ಹೇಗೆ ಆಗ ಬೇಕು? ಅದಕ್ಕಾಗಿ ಸೋಮಪ್ಪನ ಹೆಂಡತಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಆಗ ಸೋಮಪ್ಪನಿಗೆ ಭೂತದಿಂದ (Ghost and Past) ಬಿಡಿಸಿಕೊಳ್ಳುವ ಮನಸ್ಸಾಗುತ್ತದೆ. ಈ ಎಚ್ಚರ ಅವನನ್ನು ನಿಜವಾದ ಮನುಷ್ಯನನ್ನಾಗಿ ಮಾಡುತ್ತದೆ. ಆತ ನಿಜವಾದ ಮನುಷ್ಯನಾದಾಗ ಅವನಿಗೆ ಭೂತ ವರ್ತ ಮಾನ ಭವಿಷ್ಯದ ಬಗ್ಗೆ ನಿಜವಾದ ಅರಿವು ಆಗುತ್ತದೆ. ಆದ್ದರಿಂದಲೇ ಅವನಿಗೆ ಉಂಗುರವನ್ನು ತೊರೆಯುವ, ಮಕ್ಕಳನ್ನು ಸಲಹುವ ಮನಸ್ಸಾ ಗುತ್ತದೆ. ಹೀಗೆ ನಿಜವಾದ ಮನುಷ್ಯನಾಗಿದ್ದ ಸೋಮಣ್ಣ—ಅತಿಮಾನವ ವಾಗಿ ಮತ್ತೆ ಮಾನವನಾಗುವಲ್ಲಿಗೆ ಕಾದಂಬರಿ ಮುಕ್ತಾಯವಾಗುವುದೂ, ಅರ್ಥಪೂರ್ಣವಾಗುತ್ತದಲ್ಲದೆ ದ್ವಂದ್ವ ವ್ಯಕ್ತಿತ್ವದ ವ್ಯಕ್ತಿ ಇದ್ದಲ್ಲೇ ಇರು ತ್ತಾನೆ (Still life) ಎಂಬುವುದಕ್ಕೂ ಸಂಕೇತವಾಗುತ್ತದೆ.

ನಿಮ್ಮ ಬರವಣಿಗೆಗೆ ಒದಗಿಸಿಕೊಳ್ಳುವ ಶಕ್ತಿಯು ಜೊತೆಗೆ ಸೂಕ್ಷ್ಮ ವಿಚಾರಗಳನ್ನು ಅನುಭವಗಳನ್ನು ಹಿಡಿದಿಟ್ಟುಗೊಳ್ಳುವ ಆಯುಸ್ಸಾಂತ

ಶಕ್ತಿಯೂ ಇರುವುದನ್ನು ನಾನು ಗಮನಿಸಿದ್ದೇನೆ. ಉದಾಹರಣೆಗೆ ಸೋಮಣ್ಣ ಭೂತದ ದಯೆಯಿಂದ ನೆರವಿನಿಂದ ಬಂಗ್ಲೆ ಎಬ್ಬಿಸಿದಾಗಿನ ಚಿತ್ರ... ಅದು ಸಹಜ ಸುಂದರವಾಗಿ ಬಂದಿದೆ ಅಲ್ಲಿ ಆ ಬಂಗ್ಲೆಯಲ್ಲಿ ದೇವರ ಫೋಟೋ ಇರಲಿಲ್ಲ ಎಂದು ಹೇಳಲು ನೀವು ಮರೆಯದಿದ್ದುದನ್ನು ನಾನು ಎಚ್ಚರದಿಂದ ಗಮನಿಸಿದ್ದೇನೆ. ಫ್ಯೂಡಲ್ ಪದ್ಧತಿ ದೇವರನ್ನು ಹೇಗೆ ಶೋಷಣೆಗೆ ಉಪಯೋಗಿಸಿತು ಎಂದು ನಾವು ಬಲ್ಲೆವು. ಸೋಮಣ್ಣ ಫ್ಯೂಡಲ್ ಪದ್ಧತಿಯ ವಿರೋಧಿಯಾಗಿದ್ದೂ ಕೊನೆಗೆ ಅದರ ಪ್ರತಿನಿಧಿಯಾದದ್ದು ತುಂಬ ರೋಚಕವಾಗಿಯೇ ಮೂಡಿ ಬಂದಿದೆ. ಚುನಾವಣೆ ನಡೆಸಿ ಆತ ಪ್ರಧಾನಿಯಾದದ್ದು, ಪ್ರಧಾನಿಯಾಗಿ ಮಂತ್ರಿಗಳ ಖಾತೆಗಳನ್ನು ಹಂಚಿಕೊಂಡದ್ದು, ಪತ್ರಿಕಾ ಪ್ರತಿನಿಧಿಗಳನ್ನು ನಿರ್ಲಕ್ಷಿಸಿದ್ದು ಶುದ್ಧ ರಾಜಕೀಯ ವಿಡಂಬನೆಯಾಗಿದ್ದು ನಮ್ಮ ರಾಜಕಾರಣಿಗಳು ಅಧಿಕಾರ ಸಿಗುವ ತನಕ ಎಂಥ ನಾಟಕವಾಡಿ ಅಧಿಕಾರ ಸಿಕ್ಕಿದ ಮೇಲೆ ಎಂತಹ ಸ್ವಾರ್ಥಿ ಮತ್ತು ಸರ್ವಾಧಿಕಾರಿಗಳಾಗುತ್ತಾರೆ ಎಂಬುದನ್ನು ಇದು ಹೇಳುತ್ತದೆ.

ಇಷ್ಟೆಲ್ಲ ಇದ್ದೂ 'ಉಂಗುರದ ಗುಲಾಮ' ಜನಪ್ರಿಯ ಕೃತಿಯಾಗಲು ಸಾಧ್ಯವೇ? ಅಥವಾ ಇದೇ ಮಹತ್ವದ ಕಾದಂಬರಿಯೇ ಎಂದು ನನಗೆ ನಾನೇ ಪ್ರಶ್ನಿಸಿದ್ದಿದೆ. ಫ್ಯಾಂಟಸಿಯ ಕಲ್ಪನೆ ನಮ್ಮಲ್ಲಿ ತೀರಾ ಕಡಿಮೆ ಇರುವುದರಿಂದ ಜನ ಸಾಮಾನ್ಯರಿಗೆ ಇದು ಸುಲಭವಾಗಿ ದಕ್ಕುವಂಥಾದ್ದಲ್ಲ. ಮಾತ್ರವಲ್ಲ ಸ್ವಲ್ಪ ಎಚ್ಚರ ತಪ್ಪಿದರೂ ಇದು 'ಚಂದಮಾಮ'ದ ಕತೆಯ ಹಾಗಾಗುವ ಸಂಭವ ಇದ್ದೂ ನೀವು ಏಗಿದ್ದರಿಂದ ಆ ಅಪಾಯದಿಂದ ಕೃತಿ ಪಾರಾಗಿದ್ದರೂ ಕೃತಿಯು ಎಲ್ಲೋ ಒಂದು ಕಡೆ ಸೋತ ಹಾಗೆ ಅನ್ನಿಸುತ್ತದೆ, ಪ್ರಾಯಃ ನೀವು ಓದುಗರ ಜೊತೆ ಮಧ್ಯೆ ಮಧ್ಯೆ ಸಂವಾದಿಸುವುದು ಓದುಗನ ಬಗ್ಗೆ ನಿಮಗೆ ಒಂದು ರೀತಿಯ ಗುಮಾನಿ ಇದೆ ಎಂಬ ಭ್ರಮೆಯೇ ಕಾರಣ ಇರಬಹುದು. ಹಾಗೇ ಸೋಮಣ್ಣ ಗೌಡ್ತಿಯನ್ನು ಕೂಡಿದ ಮೇಲೆ ಆ ಕ್ಷಣಗಳನ್ನು ಗೌಡ್ತಿ ನೆನಪಿಸಿಕೊಳ್ಳುವುದು ಅನಗತ್ಯ ಮತ್ತು ಇಡೀ ವಸ್ತುವಿನ ಗಾಂಭೀರ್ಯದ ಬಗ್ಗೆ ಇನ್ನೂ ನಿಮಗೆ ಸ್ಪಷ್ಟವಾದ ಕಲ್ಪನೆ ಇರಲಿಲ್ಲವೋ ಎಂಬ ಸಂಶಯ ನನ್ನನ್ನು ಕಾಡುತ್ತದೆ. ಸೋಮಪ್ಪನ

ಒಳತೋಟಿಯ ಚಿತ್ರಣಕ್ಕೆ ಸಾಕಷ್ಟು ಅವಕಾಶ ಇದ್ದೂ ನೀವು ಅದನ್ನು ನಿರ್ಲಕ್ಷಿಸಿದ್ದು, ಸೋಮ್ಯಾನ ಹೆಂಡತಿಯ ಆತ್ಮಹತ್ಯೆ ಸಹಜವಾಗಿಯೇ ಬಾರದೆ ಸ್ವಲ್ಪ ಕೃತಕವಾಗುವುದು ಇವೆಲ್ಲ ಕೃತಿಯ ಆಳ ಮತ್ತು ವಿಸ್ತಾರ ವನ್ನು ಕಡಿಮೆ ಮಾಡಿದೆ. ಆದರೂ ಈ ಸಂಶಯಗಳು ನನ್ನವೇ ಹೊರತು ಎಲ್ಲ ಓದುಗರದ್ದು ಆಗದು ಎಂದು ನಂಬಿದ್ದೇನೆ.

ಕೊನೆಗೂ ಒಂದು ಪ್ರಶ್ನೆ - ನಿಮ್ಮ ಮೊದಲ ಕಾದಂಬರಿ "ಕವಲುಗಳು" ಯಶೋಧರ ಚರಿತ್ರೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿದ್ದು ಇದೀಗ "ಉಂಗುರದ ಗುಲಾಮ"ನೂ ಒಂದು ಜಾನಪದ ಕತೆಯೋ ಅಥವಾ ಪೌರಾಣಿಕ ವಸ್ತುವೋ ಅನ್ನುವ ರೀತಿಯಲ್ಲಿ ಹುಟ್ಟಿಕೊಂಡಿದೆ. ಅನುಭವ ಗಳನ್ನು ಹೀಗೆ ಒಂದು ಚೌಕಟ್ಟಿನೊಳಗೆ ಹಿಡಿದಿಟ್ಟು ಬರೆಯುವಾಗ ಸಿಗುವ ಕೆಲವು ಅನುಕೂಲತೆಗಳ ಹಾಗೇ ಅನಾನುಕೂಲತೆ ಅಥವಾ ಸೀಮಿತತೆ ಇದ ಎಂದು ನಿಮಗೆ ಅನ್ನಿಸುವುದಿಲ್ಲವೇ? ಇದರರ್ಥ ನೀವು ಈ ಚಕ್ರದಿಂದ ಹೊರಬನ್ನಿ ಅಂತ ಅಲ್ಲ; ಅಲ್ಲೇ ಗಿರಕಿ ಹೊಡೆಯಬೇಡಿ ಅಂತ ಮಾತ್ರ ಒಂದು ಸಣ್ಣ ಸೂಚನೆ.

ಅಜಿತರೇ, ನಾನು ಎಲ್ಲಿಂದಲೋ ಹೊರಟು ಎಲ್ಲಿಗೋ ಬಂದು ನಿಂತಿ ದ್ದೇನೆ. ನಿಮಗೆ ಈ ನನ್ನ ಒಂಟಿ ಪ್ರಯಾಣ ಹೇಗೆ ಅನಿಸಿತೋ ತಿಳಿಯ ಆದರೂ ನನಗೊಂದು ಸಮಾಧಾನ-ನಿಮ್ಮ ಕೃತಿಗೆ ನನ್ನಿಂದ ಅಪಚಾರವಾಗಿ ರಲಿಕ್ಕಿಲ್ಲ ಎಂದು. ಅಷ್ಟಾದರೆ ಸರಿ; ಮತ್ತಿನ್ನೇನು ಬೇಕು; ಅಲ್ಲವೆ?

ಮತ್ತೆ ಬರೆಯಿರಿ. ನಾನು ಅದನ್ನು ಓದಲು ಕಾಯುತ್ತಿದ್ದೇನೆ.

'ಕವಿತಾ'
ಕಾಂತಾವರ— 564 129.
7-4-1989

ಪ್ರೀತಿಯಿಂದ ನಿಮ್ಮ
ನಾ. ಮೊಗಸಾಲೆ.

## "ಕವಲುಗಳು" ಕುರಿತಂತೆ....

ದಾಂಪತ್ಯ ಜೀವನದ ಮೂಲಭೂತ ಸಮಸ್ಯೆಗಳನ್ನು ವಿವರಿಸುವ ಕಿರುಕಾದಂಬರಿಯೇ 'ಕವಲುಗಳು'...... ಯಶೋಧರ ಪ್ರಥಮ ನಾಯಕ. ಅಮೃತಮತಿ ಯಶೋಧರನ ನಲ್ಲೆ. ಅಷ್ಟಾವಂಕ, ಅಮೃತಮತಿಯ ಕಾಮದ ಮನಸ್ಸಿಗೆ ಬಂದ ಪಾತ್ರ. ಜೈನಧರ್ಮದ ಹಿನ್ನಲೆಯಲ್ಲಿ ಮೂಲದ ಈ ಎಳೆಯನ್ನು ಪ್ರಸಾದ್‌ರವರು ಹೊಸ ಆಲೋಚನೆಯ ಮೂಲಕ ತಾರ್ಕಿಕವಾಗಿ ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ. ಯಶೋಧರನ ವ್ಯಕ್ತಿತ್ವ ಕಾಮುಕನ ರೀತಿಯಲ್ಲಿ ನಿರೂಪಿತವಾದರೆ, ಅಮೃತಮತಿ ಪೂರ್ಣ ನಂಬಿಕೆಯ ಸ್ತ್ರೀರೂಪವಾಗಿ ಮೂಡಿದ್ದಾಳೆ. ಸೌಮ್ಯಮಿತ್ರನ ಪಾತ್ರವಂತೂ ಅರ್ಥಪೂರ್ಣವಾಗಿದೆ. ಮೂರು ವ್ಯಕ್ತಿಗಳ ಬದುಕಿನ ನೈಜ ಕಾಮದೃಷ್ಟಿ ಕವಲು ಕವಲಾಗಿರುವುದೇ ಕಾದಂಬರಿಯ ಬೆಳವಣಿಗೆ. ಪ್ರಸಾದರ ಹೊಸ ದೃಷ್ಟಿ ವಿಶಿಷ್ಟವಾಗಿದೆ.

— ಗ್ರಂಥಲೋಕ

...ಸರಳ ಸುಂದರ ಶೈಲಿಯಲ್ಲಿ ಕಾದಂಬರಿ ವೇಗವಾಗಿ ಓದಿಸಿಕೊಂಡು ಹೋಗುತ್ತದೆ. ಸೌಮ್ಯಮಿತ್ರ, ಯಶೋಧರ, ಅಮೃತಮತಿಯ ಪಾತ್ರಗಳು ಹೃದಯಂಗಮವಾಗಿವೆ. ಈ ತರಹದ ಹೊಸ ರೀತಿಯ ಬರವಣಿಗೆಯನ್ನು ಬಳಸಿಕೊಂಡು ಲೇಖಕರು ಅತ್ಯುತ್ತಮವಾದ ಹಲವಾರು ಕಾದಂಬರಿಗಳನ್ನು ನೀಡಲಿ, ಎಂದು ಹಾರೈಸುವಂತಿದೆ. ಮುದ್ರಣ ಸೊಗಸಾಗಿದೆ.

— ವಿಕ್ರಮ

ಕಾಮವನ್ನು ವಿಭಿನ್ನ ಕೋನಗಳಿಂದ ವಿಶ್ಲೇಷಿಸುವ ಪ್ರಯತ್ನವನ್ನು ಕತೆಗಾರ ಮಾಡಿದ್ದಾರೆ. ...ಕಾದಂಬರಿಯಲ್ಲಿ ಬರುವ ಪಾತ್ರಗಳ ತುಮುಲವನ್ನು ಹೃದಯಂಗಮವಾಗಿ ಚಿತ್ರಿಸುವಲ್ಲಿ ಕತೆಗಾರ ಸಾಕಷ್ಟು ಯಶಸ್ವಿಯಾಗಿದ್ದಾರೆ. ಪಾತ್ರ ಚಿತ್ರಣ ಮನ ಸೆಳೆಯುತ್ತದೆ... ಸರಳ ಶೈಲಿಯಲ್ಲಿ ಆಶಯವನ್ನು ನಿರೂಪಿಸುವ ಮೂಲಕ ಕಥನ ಕೌಶಲ್ಯವನ್ನು ಅವರು ಪ್ರಕಟಿಸಿದ್ದಾರೆ. ಓರ್ವ ಭರವಸೆಯ ಕಾದಂಬರಿಕಾರನಾಗುವ ಸಾಮರ್ಥ್ಯವನ್ನು ಅಜಿತ್‌ಪ್ರಸಾದ್ ಈ ಕೃತಿಯಲ್ಲಿ ತೋರಿಸಿಕೊಂಡಿದ್ದಾರೆ; ಎನ್ನಬಹುದು.

— ಹೊಸ ದಿಗಂತ

ಪ್ರಸ್ತುತ ಕಾದಂಬರಿ ಕಾವ್ಯದ ಬಗೆಗಿನ ಭಿನ್ನ ವಿಶ್ಲೇಷಣೆಯ ಒಂದು ಪ್ರಯತ್ನ. ಕಥೆಯಲ್ಲಿ ಬರುವ ಯಶೋಧರ, ಅಮೃತಮತಿ, ಮನುಷ್ಯ ದೌರ್ಬಲ್ಯಗಳ ಪ್ರತೀಕವಾಗಿ "ಅನೈತಿಕ" ವ್ಯವಹಾರದಲ್ಲಿ ನಿರತರಾಗಿದ್ದಾಗಲೆ ಸಿಕ್ಕಿ ಬೀಳುವ ಅಮೃತಮತಿ, ಸೌಮ್ಯಮಿತ್ರರ ಬಗ್ಗೆ ಪತಿ ಯಶೋಧರ ತೆಗೆದುಕೊಳ್ಳುವ ತೀರ್ಮಾನ ಮಾರ್ಮಿಕ. ಹಳೇ ಕಾವ್ಯದಲ್ಲಿನ ವಸ್ತು ವಿಷಯವೊಂದಕ್ಕೆ ಲೇಖಕರು ಹೊಸ ವೈಚಾರಿಕತೆಯನ್ನು ತಂದುಕೊಟ್ಟಿದ್ದಾರೆ

— ನವೋದಯ

ಅಜಿತ್‌ಪ್ರಸಾದರು ಜನ್ನನ 'ಯಶೋಧರ ಚರಿತೆ' ಕಾವ್ಯಕ್ಕೆ ಕನ್ನ ಹಾಕಿ ಕಥೆಯ ಮೂಲ ಆಶಯವನ್ನು ಅನಾವರಣಗೊಳಿಸಿದ್ದಾರೆ. ಆಧುನಿಕ ತಿಳುವಳಿಕೆಯ ಬೆಳಕಿನಲ್ಲಿ ಹಿಂದಿನ ಕಾವ್ಯವೊಂದನ್ನು ಹಿಡಿದು ನೋಡುವ ಪ್ರಾಂಜಲ ಪ್ರಯತ್ನ ಇದು...ಸಾಂದ್ರವಾಗಿದ್ದ ಧಾರ್ಮಿಕ ಅವಕಾಶವನ್ನು ತೆಳುವಾಗಿಸಿ ಪಾತ್ರಗಳನ್ನು ಕಡಿಮೆ ಮಾಡಿದ್ದಾರೆ. ಭವಾವಳಿ ನಿವಾರಣೆಯಾಗಿದೆ. ಪಾತ್ರಗಳ ಪರಿಕಲ್ಪನೆಯಲ್ಲೂ ಮಾರ್ಪಾಟು ಆಗಿವೆ..ಇದೆಲ್ಲದರ ಪರಿಣಾಮವಾಗಿ ಕಥೆಯ ಪ್ರಕ್ರಿಯೆಗೆ ಹೊಸತನ ಬಂದಿದೆ ವರ್ತಮಾನ ಬುದ್ಧಿಗೆ ಇದು ಸುಲಭಗ್ರಾಹ್ಯವಾಗಬಹುದು..........

—ಡಾ|| ಹಂ. ಪ. ನಾ.

ಹೊಸ ದೃಷ್ಟಿಕೋನದಿಂದ 'ಪುರಾಣ'ವನ್ನು ನೋಡಲು ಪ್ರಯತ್ನಿಸುವ ನಿಮ್ಮ ಪ್ರಯತ್ನ ಶ್ಲಾಘನೀಯ ಈ ನಿಟ್ಟಿನಲ್ಲಿ ನೀವು ಯಶಸ್ವಿಯೂ ಆಗಿದ್ದೀರಿ...ನಿಮ್ಮಿಂದ ಇನ್ನಷ್ಟು ಕೃತಿಗಳು ಯಶಸ್ವಿಯಾಗಿ ಮೂಡಿಬರಲಿ ಎಂದು ಹಾರೈಸುತ್ತೇನೆ.

— ಡಾ|| ನಾ. ಮೊಗಸಾಲೆ

'ಜನ್ನನ ಯಶೋಧರ' ಚರಿತ್ರೆಯನ್ನು ಆಧುನಿಕ ದೃಷ್ಟಿಕೋನದಿಂದ ಅವಲೋಕಿಸುವಂತಹ ಎಸ್. ಪಿ. ಅಜಿತ್‌ಪ್ರಸಾದರವರ 'ಕವಲುಗಳು' ಒಳ್ಳೆಯ ಪ್ರಯತ್ನ..ಇಲ್ಲಿನ ಅಮೃತಮತಿಗೆ ಕನ್ನಡದ ಬಹುಪಾಲು ವಿಮರ್ಶಕರು (ಜಿ ರಾಜಶೇಖರರನ್ನು ಹೊರತುಪಡಿಸಿ) ನೈತಿಕ ತೀರ್ಪನ್ನೇ ಕೊಟ್ಟವರು. ಈ ಕಾದಂಬರಿಯಲ್ಲಿ ಅಜಿತ್‌ಪ್ರಸಾದ್‌ರವರು ಅಮೃತಮತಿಯ ಪಾತ್ರಕ್ಕೆ ಎಷ್ಟು ನ್ಯಾಯ ದೊರಕಿಸಿದ್ದಾರೆಂಬುದು ಮುಖ್ಯವೆಂದು

ನನ್ನ ಅಭಿಪ್ರಾಯ. ಈ ಕೃತಿಯು ಗೆಲವು ಅಡಗಿರುವುದು ಕೂಡಾ ಇದರಲ್ಲಿಯೇ.

—ಫಕೀರ್ ಮುಹಮ್ಮದ್ ಕಟ್ಪಾಡಿ

ಎಸ್. ಪಿ. ಅಜಿತ್‌ಪ್ರಸಾದರು ತಮ್ಮ 'ಕವಲುಗಳು' ಕಾದಂಬರಿಯಲ್ಲಿ ಹೇಳಬೇಕಾದುದನ್ನು ಸರಳವಾಗಿ, ನೇರವಾಗಿ ನಿರೂಪಿಸುತ್ತಾರೆ. ಯಶೋಧರ ಚರಿತೆಯ ಪಾತ್ರಗಳಿಗೆ ಹೊಸ ಚಿಂತನೆಗಳನ್ನು ನೀಡುವುದರ ಮೂಲಕ ಕಾದಂಬರಿಯನ್ನು ಪೂರ್ಣ ಓದುವಂತೆ ಮಾಡಿದ್ದಾರೆ.........

—ಐ. ಕೆ. ಬೊಳುವಾರು

......... ಕತೆ ಅಮೃತಮತಿಯದೇ ಆದಿದ್ದರೂ ನೀವು ಕಾಣುವ, ಕಂಡಿರಿಸಿರುವ ಅಮೃತಮತಿ ನಿನ್ನ ಕಾಣ್ಕೆಯ ಫಲ. ಛಲಗಾರಳಾದರೂ ಅಸಹಾಯಕಳು, ಯಶೋಧರ ಸೌಮ್ಯವಂತನಾದರೂ ಕಣ್ಣಾಚೆಗೆ ದೂಡುವ ಕಠಿಣ. ಪುನರುಕ್ತವಾಗುವ ಗಾನ ಏನೆಲ್ಲವನ್ನೂ ಹೇಳಬಲ್ಲದು. ಅಷ್ಟು ಶಕ್ತಿಯುತವಾಗಿದೆ. ನನ್ನ ಅಭಿನಂದನೆ ಸ್ವೀಕರಿಸು ಮಾರಾಯ....

—ಕೆ. ಎಂ. ಮುನಿಕೃಷ್ಣಪ್ಪ

ಬರಹ ಸರಳವಾಗಿದೆ. ಸುಂದರವಾಗಿದೆ. ಜೊತೆಗೆ ಶಕ್ತ ಕೂಡ. ವಿವರಗಳನ್ನು ಕಟ್ಟಿಕೊಡುವಾಗ ಅದರ ಸರಳತೆ ಸುಂದರತೆಗಳನ್ನು ಚೆನ್ನಾಗಿ ದುಡಿಸಿಕೊಂಡಿದ್ದೀರಿ. ಅಮೃತಮತಿಯ ಮಾನಸಿಕ ತುಮುಲ ವ್ಯಕ್ತಪಡಿಸುವಾಗ ನಿಮ್ಮ ಭಾಷೆ ಎಷ್ಟು ಶಕ್ತ, ನೀವೆಷ್ಟು ಸಂಯಮಿಗಳು ಎನ್ನುವುದು ಎದ್ದು ತೋರುತ್ತದೆ............

—ಮೊರಬದ ಮಲ್ಲಿಕಾರ್ಜುನ

......... ಈ ಕಾದಂಬರಿಯಲ್ಲಿ ಬರುವ ಯಶೋಧರನಾಗಲಿ, ಅಮೃತಮತಿಯಾಗಲಿ, ಅಥವಾ ಸೌಮ್ಯಮಿತ್ರನಾಗಲಿ ಕೇವಲ 'ಸಿದ್ಧಪಾತ್ರ'ವಾಗದೆ ಮನುಷ್ಯನ ವಿಭಿನ್ನ ಸ್ವಭಾವ ಹಾಗೂ ದೌರ್ಬಲ್ಯಗಳಿಗೆ ಪ್ರತೀಕವಾಗಿದಾರೆ. ರಂಜನೀಯ ನಾಟಕೀಯ ಶೈಲಿ ಹಾಗೂ ಬಿಗುವಾದ ಭಾಷಾ ಬಂಧದಿಂದ ಹಂತಹಂತವಾಗಿ ಓದುಗರನ್ನು ತೀವ್ರ ವೈಚಾರಿಕ ಚಿಂತನೆಯತ್ತ ತಲುಪಿಸುವುದರಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ.

—ಕೆ. ದೇವರಾಜ ಹೆಗ್ಡೆ (ಮುನ್ನುಡಿಯಿಂದ)

ಚರ್ಮಬೂನದ ಅನೇಕ ಘಟನೆಗಳು, ಸನ್ನಿವೇಶಗಳು ಚರಿತ್ರೆಯ ಸಂದರ್ಭದಲ್ಲಿ 'ಪುರಾಣವಾಗುವ ದುರಂತವಿರುವಾಗ ಪುರಾಣದಕತೆಯೊಂದರಲ್ಲಿ 'ವರ್ತಮಾನ' ಹುಡುಕುವ ಅಹಿತರ ಪ್ರಯತ್ನ ಸಾಮಾಜಿಕ ಕಳಕಳಿಯ ಪ್ರತೀಕವಾಗಿದೆ. ಕಾದಂಬರಿ ಮೊದಲನೆಯದಾದರೂ ಆವರಿಸಿಕೊಳ್ಳುವ ಗುಣವಿದೆ.

—ಗಂಗಾರೆಡ್ಡಿ ಕೋಡಿಕಾಂಪುರ

ನನ್ನ ಪ್ರೀತಿಯ

ಸೋಮಾರಿ ಕಟ್ಟೆ. ಗೆಳೆಯರ ಬಳಗಕ್ಕೆ

ಅಕ್ಕರೆಯಿಂದ

## ಮುಂದಿನ ಕೃತಿಗಳು :

ಒಂದು ತಿಂಗಳಲ್ಲಿ...

(ಭಾವ ಗೀತೆಗಳು)

ಅಪರಾಧಿ ನಾನಲ್ಲ

ಮತ್ತು

ಅಸಾಧ್ಯತೆಯು ಸಾಧ್ಯತೆಯಲ್ಲಿ

(ಎರಡು ಏಕಾಂಕ ನಾಟಕಗಳು)

ನೆರಳು

(ಕಥಾ ಸಂಕಲನ)

# ಉಂಗುರದ ಗುಲಾಮ

೧ ಪ್ರಿಯ ಓದುಗ,

ಬೇದೂರಿನ ಹೆಸರನ್ನು ನೀವು ಬಹುಶಃ ಕೇಳಿರುವುದಿಲ್ಲ, ಎಂದು ಭಾವಿಸುತ್ತೇನೆ. ಅದು, ನೀವು ಕೇಳಬಹುದಾದ ಹೆಸರಾಗಿರಲು ಯಾವ ಕಾರಣವೂ ಇರಲಿಲ್ಲ. ಅಸಮಾನ್ಯಪುರದ ಸಹಸ್ರಾರು ಹಳ್ಳಿಗಳಂತೆಯೇ ಅದು ಒಂದು ಸಾಮಾನ್ಯ ಹಳ್ಳಿ. ಐವತ್ತು ಮುಳಿಹುಲ್ಲಿನ ಮನೆಗಳು ಅಡ್ಡಾದಿಡ್ಡಿಯಾಗಿ ಹಬ್ಬಿವೆ. ಸುತ್ತಲ ಕೊಚ್ಚೆ ನೀರಿನಿಂದಾಗಿ ಅದೊಂದು ದ್ವೀಪವೆ. ಬೆನ್ನು-ಹೊಟ್ಟೆಗೆ ನಿಕಟ ಸಂಪರ್ಕ ಎದ್ದಿರುವ ಮನುಷ್ಯರೂಪಿ ಪ್ರಾಣಿಗಳು ತಮ್ಮ ಹಂಚಿ ಕಡ್ಡಿ ಕಾಲನ್ನು ಅತ್ತಿಂದಿತ್ತ, ಇತ್ತಿಂದತ್ತ ಆಡಿಸಿ, ಬಾಯಲ್ಲಿ ಮೋಟು ಗಣೇಶ ಬೀಡಿ ಹೊಗೆ ಹಾರಿಸುತ್ತಾ ಓಡಾಡುತ್ತಿವೆ... ಮುಂಜಾನೆ ಆಗುತ್ತಲೇ ಎಲ್ಲಿಲ್ಲದ ಚಟುವಟಿಕೆ ಪೊದೆಗಳ ಸಂದಿಯಲ್ಲಿ, ಗಿಡಗಳ ಮರೆಯಲ್ಲಿ, ತಗ್ಗು ದಿಣ್ಣೆಗಳಲ್ಲಿ ಹಂದಿಗಳ ಸಂಭ್ರಮದ ಓಡಾಟ... ಮನೆಗಳಿಂದ ಹೊಗೆ ಏಳುತ್ತವೆ... ಎಲ್ಲ ಮನೆಗಳಿಂದಲೂ ಹೊಗೆ ಏಳಲೇ ಬೇಕೆಂಬ ನಿಯಮವೇನೂ ಇಲ್ಲ. ಧನಿಯ ಮುಂದೆ ಬಗ್ಗಿಸಿದ ಸೊಂಟ ಮನೆಯಲ್ಲಿಯೂ ನಿತ್ಯ ಅದನ್ನೇ ಮಾಡುತ್ತಿರುವುದರಿಂದ ಚಿಳ್ಳೆ ಪಿಳ್ಳೆಗಳ ಸಂಖ್ಯೆ ಸಾಕೆನ್ನಿಸುವಷ್ಟಿದೆ. ನಮ್ಮ ನಾಯಕರಾದ ಶ್ರೀ ಶ್ರೀ ಸೋಮಪ್ಪನವರ ಭೇಟಿ ಅಷ್ಟು ಸುಲಭ ಸಾಧ್ಯವಲ್ಲ, ಕೊಚ್ಚೆಯಿಂದ ಆವೃತವಾದ ಇವರ ಗುಡಿಸಲು ಆ ಪಾಳ್ಯದ ಅಸಂಖ್ಯಾತ ಗ್ರಾಮಸಿಂಹಗಳಿಂದ ರಕ್ಷಿಸಲ್ಪಡುತ್ತಿದೆ, ಆ ಕೊಚ್ಚೆಯ ಸಾಗರವನ್ನೊಮ್ಮೆ ಈಜಾಡಿಯೊ, ಹಾರಾಡಿಯೊ

ಹೇಗಾದರೂ ಒಮ್ಮೆ ದಾಟಿ ಬಂದರೆ, ಅದೋ ಅಲ್ಲಿ ನೋಡಿ! ಶ್ರೀ ಶ್ರೀ ಸೋಮಪ್ಪನವರ ಅರಮನೆಯ ದಿಡ್ಡೀ ಬಾಗಿಲಿನ ಎದುರಿಗೆ ಅವರ ಐದನೇ ಮಗ ತನ್ನ ದಿನ ನಿತ್ಯದ ಕಾರ್ಯ ಮುಗಿಸುತ್ತಿದ್ದಾನೆ, ಅವನ ಮುದ್ದು ನಾಯಿಯೂ ಸಹಾ! ಅಪರಿಚಿತರನ್ನು ಕಂಡ ತಕ್ಷಣವೇ ಅವನು ಎದ್ದೋಡಿ ರಾಗದಲ್ಲಿ ಗರ್ಜಿಸಿದ, ಎಂದರೆ, ಮುಗಿಯಿತು, ಅವನೊಟ್ಟಿಗೆ ಶಂಖವಾದ್ಯ ಮಾಡಲು ಎಲ್ಲ ದಿಕ್ಕಿನಿಂದಲೂ ಹತ್ತಾರು ಗ್ರಾಮ ಸಿಂಹಗಳು ಶ್ರುತಿ ಸೇರಿಸುತ್ತವೆ. ಎಚ್ಚರಿಕೆ! ನಾವೀಗ ಹೀಗೆ ನೇರ ಹೋದರೆ ಆ ಗ್ರಾಮ್ಯ ಸಿಂಹಗಳ ಧಾಳಿಯಲ್ಲಿ ಏನೇನೋ ಆಗಿಬಿಡುವ ಅಪಾಯ ಇದೆ. ಇಲ್ಲಿಂದ ಮುಂದೆ ನಾವು ನಮ್ಮ ದಿವ್ಯ ಸಾಮರ್ಥ್ಯದಿಂದ ಅದೃಶ್ಯರಾಗಿ ಮುಂದುವರೆ ಯುವ ಹಾ! ಇನ್ನು ತೊಂದರೆ ಇಲ್ಲ... ಸೀದಾ ನಮ್ಮ ನಾಯಕರಾದ ಶ್ರೀ ಶ್ರೀ ಸೋಮಪ್ಪನವರನ್ನು ಕಾಣಬಹುದು, ಅದೋ ಅಲ್ಲಿ ನೋಡಿ! ನಮ್ಮ ನಾಯಕರು ತಮ್ಮ ಬಾಯಲ್ಲಿರುವ ಮೋಟು ಗಣೇಶ ಬೀಡಿಯಿಂದ ಒಂದೇ ಸಮನೆ ಪುಸ ಪುಸಾಂತ ಹೊಗೆ ಬಿಡ್ತಿದ್ದಾರೆ...ಸೂರು ನೋಡ್ತಾ ಅಂಗಾತ ಮಲಗವರೆ. ಸುಮಾರು ಹೊತ್ತಿಂದ ಒಂದೇ ತರ ಮಲಗಿ ಬೆನ್ನು ನೋವಾಯ್ತು...ಒಂದ್ ಸಲ ಎದ್ದು ಮೈಮುರಿದು ಕೂತ್ಕೊಂಡ್ರು, ತಲೆ ಮೇಲೆ ಏನೋ ಹರಿದಂಗ್ನಾಯ್ತು... ಪರಪರಾಂತ ಒಮ್ಮೆ ಕಾಲ್ನ ಕೆರ್ಕೊಂಡ್ರು ಕುಂಡೀಲಿ ಏನೋ ಹೊಕ್ಕಂತೆ ಆಯ್ತು... ಒಮ್ಮೆ ತಿಕ ಕೆರ್ಕೊಂಡ್ರು, ತತ್ತೇರಿ, ಅಂತಂದು, ಒಮ್ಮೆ ತಮ್ಮ ಕೂದಲು ಗಡ್ಡ ಕೆರ್ಕೊಂಡ್ರು ಸಮಾಧಾನ ಆಗ್ಲಿಲ್ಲ... ಥುಚ್ ಅಂತ ಉಗಿಯುವ ಮನಸ್ಸಾಯ್ತು... ಕಡೇಗ್ ಏನೂ ಮಾಡೋಕು ತೋಚದೆ, ತಂಬಿಗೆ ಹಿಡ್ಕೊಂಡ್ ಹಿತ್ತಲ ಕಡೆ ಹೋದ್ರು, ಛೇ! ಛೇ! ಛೇ! ಅಲ್ಲಿಲ್ಲಾ ನಾವು ನಮ್ಮ ನಾಯಕರನ್ನು ಹಿಂಬಾಲಿಸೋದು ಬೇಡ, ಇಕಾ, ಇಲ್ಲೇ ಕಾಯ್ತಾ ಕೂತಿರೋಣ. ಏಕಾಂತದಲ್ಲಿ ನಡೀಬೇಕಾದ ಆ ಪವಿತ್ರ ಕೆಲ್ಸವನ್ನು ಸಾಂಗ ವಾಗಿ ಮುಗ್ಸಿ, ನಂತ್ರ ನಮ್ಮ ನಾಯಕರು ಹಿಂತಿರುಗಲಿ. ಆಗ ನಾವೂ ಅವರ ಹಿಂದಾಗೋಣ. ನಮ್ಮ ನಾಯಕರು ಎಲ್ಲಿದ್ದರೆ, ನಾವಲ್ಲಿ, ನಮ್ಮ ದಿವ್ಯ ಶಕ್ತಿಯಿಂದ ಹಿಂಬಾಲಿಸುವ. ಸರಿ. ಓದುಗ, ಈಗ ನಿನ್ನ ಬಾಯಿ ಮುಚ್ಚಿಕೊ, ಕಣ್ಣು, ಕಿವಿ, ಮೆದುಳು ತೆರೆದುಕೊ.

ಶ್ರೀ ಶ್ರೀ ಸೋಮಪ್ಪನವರು ತಮ್ಮ ಎಲುಬುಗಳ ಮೇಲಿರುವ ಮೂಳೆಗಳನ್ನ ಎಣಿಸುತ್ತಿದ್ದಾರೆ. ಒಂದು, ಎರಡು— ಮೂರು...ನಾಲ್ಕು ಇಂದಿಗೆ ಆ ಗಡು ಮುಗಿಯುತ್ತದೆ, ಆ ನನ್ಮಗ ಸಾವುಕಾರ್ ಅವತ್ತೇ ಹೇಳ್ಬಿಟ್ಟದ್ದ. ಇವತ್ತೇನಾದ್ರೂ ಅವ್ನ ಸಾಲ ಕೊಡ್ದೇ ಇದ್ರೆ "ಮೈ ಚರ್ಮ ಸುಲ್ದು ನಿನ್ ಬಾಡ್ನ ಕಿತ್ತು ಊಟ ಮಾಡ್ಬಿಡ್ತೀನಿ" ಅಂತ ಸೋಮಪ್ಪ ನವರಿಗೆ ನಗು ಬಂತು. ಎಲಾ! ಎಲಾ! ಆ ನನ್ಮಗನ ದುರಾಸೆಯೇ? ನನ್ ಮೈಮ್ಯಾಗೆ ಬಾಡು ಇದ್ರಲ್ವಾ, ಅವ ತಿನ್ನೋದು...ಆದ್ರೆ, ಅದ್ಯಾಕ್ ಅಂಗಂದ್ರು? ಗೌಡ ಹೇಳಿದ್ಮ್ಯಾಕೆ ನನ್ ಮೈಯಲ್ಲಿ ಬಾಡು ಇರ್ಲೇ ಬೇಕು...ಇಲ್ದಿದ್ರೆ ಹಂಗೆ ಹೇಳ್ತಿದ್ನಾ? ನೋಡೋಣ!

"ಏನ್ಲಾ! ಕೂಲಿಗ್ ಹ್ವಾಗಲ್ವಾ? ಹೊತ್ ಮೂಡಿ ಮೂರ್ ಮಾರ್ ಮ್ಯಾಲಕ್ ಬಂತು...ಮೂದೇವಿ ಕುಂತಂಗ್ ಕುಂತಿದ್ದೀ"

ಎಂಡ್ತಿ ಅರ್ಭಟ ಕೇಳಿ ತಟ್ಟಂತ ಶ್ರೀ ಶ್ರೀ ಸೋಮಪ್ಪನವರಿಗೆ ಎಚ್ಚರವಾಯ್ತು...ಹ್ಞಂ! ಇನ್ ಎಷ್ಟು ಯೋಚಿಸಿದ್ರೂ ಅಷ್ಟೇಯಾ! ಆ ಸೂಳೇ ಮಗ್ನ ಕಾಲ್ಗೆ ಬಿದ್ದು "ಬುದ್ಧೀ, ಇನ್ನೊಂದು ನಾಕ್ ದಿನ ಟೇಂ ಕೊಟ್ಬಿಡಿ" ಅನ್ನೊದು, ಅಪ್ಪುರ್ಮ್ಯಾಕೆ ಹೆಂಗಾದ್ರೂ ಆಗ್ಲಿ...

ಶ್ರೀ ಶ್ರೀ ಸೋಮಪ್ಪನವರು ತಮ್ಮ ಮುಖದಲ್ಲಿಯ ಕುರುಚಲು ಬೆಳೆಯನ್ನ ಸವರಿದರು...ತತ್ತೇರಿ, ಬೋಳಿಮಗಂದು, ಎಷ್ಟು ಕರೆದ್ರೂ ಮತ್ತೆ ಮತ್ತೆ ಒಂದೇ ದಿನಕ್ಕೆ ಮತ್ತ್ ಬರ್ತದೆ...ಅದೇ ನವರ್ ಗದ್ದೇನಾಗ ಅದೆಷ್ಟು ಗೆಯ್ದ್ರೂ ಕೊಡೋದನ್ನೆಲ್ಲಾ ಕೊಟ್ರೇ ಪೂರೈಸಕ್ಕಾಗಲ್ಲ....

"ಈಗೇನ್ ಇಟ್ಕೊ ಉಣ್ಣಾಕ್ ಬರ್ತೀಯಾ! ಇಲ್ವಾ" ಮತ್ತೊಮ್ಮೆ ಇವ್ಳ ಅರ್ಭಟಕೇಳಿ ಶ್ರೀ ಶ್ರೀ ಸೋಮಪ್ಪನವರು ಮೇಲೆದ್ದರು... ಕಳ್ ಮುಂಡೆ, ನನ್ ಸಂಕ್ಟ ನಂಗೆ, ಇವ್ಳು ಅದೆಷ್ಟ್ ಮೋಕಾಗವ್ಳ! ಅವ್ಳಿಗೇನ್! ಅಲ್ ಕಾಯ್ತಾ ಕುಂತವ್ನಲ್ಲ, ಅವ್ಳ ಮಿಂಡ...ಕೇಳ್ ಕೇಳ್ದಾಗೆಲ್ಲಾ ಒಂದೋ, ಎರಡೋ, ಬಿಸಾಕ್ತಾನೆ, ನಂಗ್ ಮಾತ್ರ ಅವನ್ ಕೊಟ್ಟ ಮೂರು ರೂಪಾಯ್ಗೆ ಇವತ್ ಬಾಡ್ನೇ ಕೇಳ್ತಾನೆ...ನಾನೇನಾದ್ರೂ ಇವ್ಳಂಗೆ ಎಂದ್ಸಾಗಿದ್ರೆ! ಏಚ್ನೆ ಮಾಡ್ತಾನೆ ಶ್ರೀ ಶ್ರೀ ಸೋಮಪ್ಪನವರು

ಸೀದಾ ಶಾಟಿನ ಮುಂದೆ ಕುಂತಿದ್ರು—ದಪ್ ಅಂತ ಸದ್ದಾಯ್ತು—ಎಂಟ್ರು ಹಾಕಿದ ಮುಷ್ಟಿ ಅಗಲದ ಮುದ್ದೆ ಕರಗಿತು.

ಹೆಗ್ಲ ಮೇಲೆ ಪಿಕಾಸಿ ಹಾಕ್ಕೊಂಡ್ ಶ್ರೀ ಶ್ರೀ ಸೋಮಪ್ಪನವರು, ರಾಜಠೀವಿಯಲ್ಲಿ ಎದೆ ಉಬ್ಬಿಸಿ ನಡೆಯುತೊಡಗಿದರು ಅಟ್ಟಿಯತ್ತ, ಚೆನ್ನಾಗಿ.

ಮೇಲೆ ತಲೆ ಸಿಡಿಯುವ ಬಿಸಿಲು, ಕಾದ ನೆಲ, ಬರಿದ ಹೊಲ... ಪಿಕಾಸಿಯ ಒಂದೊಂದು ಹೊಡೆತಗಳ ನಡುನಡುವೆಯ ಉಸ್ಸೆಂಬ ಸದ್ದು... ಅಗೆತ... ಮತ್ತೂ ಅಗೆತ... ಒಂದೇ ಸಮನೆ, ಬಿಡುವಿಲ್ಲದ, ಅವಿಶ್ರಾಂತ ಅಗೆತ. ಬಿಸಿವ ಬೆವರ ಧಾರೆಗಳು ಹನಿಹನಿಯಾಗಿ ಭೂಮಿಗೆ ಬಿದ್ದು, ಹಾಗೇ ಇಂಗಿ ಹೋಗುತ್ತಿವೆ... ಕ್ಷಣ ಹೊತ್ತು ವಿಶ್ರಾಂತಿ... ಗಂಟೆಗಳಲ್ಲ, ನಿಮಿಷಗಳೂ ಅಲ್ಲ... ಕೆಲವೇ ಕ್ಷಣಗಳು... ಪುನಃ ಅಗೆತ, ಅಗೆತ, ಮತ್ತೂ ಮತ್ತೂ ಅಗೆತ.

ಒಂದೇ ಸಮನೆ ಬೆನ್ನು ಬಗ್ಗಿಸಿ, ಉಸಿರು ಸಿಕ್ಕಿಸಿ, ತನ್ನೆಲ್ಲ ಶಕ್ತಿಯನ್ನೂ ಒಟ್ಟುಗೂಡಿಸಿ, ನಮ್ಮ ಕಾದಂಬರಿಯ ನಾಯಕರಾದ ಶ್ರೀ ಶ್ರೀ ಸೋಮಪ್ಪನವರು ತಮ್ಮ ಕಾಯಕದಲ್ಲಿ ನಿರತರಾಗಿದ್ದಾರೆ. ಕೆಲ ಮಾರುಗಳ ಅಂತರದಲ್ಲಿ ಅವರಂತೆಯೇ ಉಳಿದ ಜೀತಗಾರರಾದ ಕಂಚ, ಚನಿಯ, ತಿಮ್ಮ ಮುಂತಾದವರೂ ತಮ್ಮ ದಿನದ ಬಾಕಿಯನ್ನು ಮುಗಿಸುವತ್ತ ಒಂದೊಂದೇ ಅಸಹಾಯಕ ಹೆಜ್ಜೆಗಳನ್ನು ಕಿತ್ತಿಡುತ್ತಿದ್ದಾರೆ...

ಚರಕ್... ಚರ್ಕ್... ಚರಕ್... ಉಳಿದವರಂತೆಯು ಶ್ರೀ ಶ್ರೀ ಸೋಮಪ್ಪನವರೂ ತಲೆ ಎತ್ತಿ ನೋಡಿದರು... ಅದೋ ಗಿರಕಿ ಚಪ್ಪಲಿಗಳು.. ತೋರವಾದ ತೊಡೆಗಳನ್ನು ತಬ್ಬಿ ನಿಂತು, ಗಾಳಿಯ ಹೊಡೆತಕ್ಕೆ ಕೊಂಚ ಕೊಂಚವೇ ಅಲುಗಾಡುತ್ತಿದ್ದ ಅಚ್ಚ ಬಿಳಿಯ ಮಲ್ ಪಂಚೆ... ರೇಶ್ಮೆ ಜುಬ್ಬ...ಎರಡೂ ಕೈಗಳಲ್ಲಿಯೂ ಅಷ್ಟಗಲದ ದೊಡ್ಡ ದೊಡ್ಡ ವಜ್ರದ ಹರಳಿನ ಚಿನ್ನದ ಉಂಗುರಗಳು.. ಭಾರಿ ಭಾರಿ ಗಿರಿಜಾ ಮೀಸೆಗಳು... ಕೆಂಡದಂತಾ... ಕಣ್ಣುಗಳು... ಬಂತು... ಬಂತು... ಬಂತು...

ಹತ್ತಿರ.... ಹತ್ತಿರ... ಇನ್ನೂ ಇನ್ನೂ ಹತ್ತಿರ ಹತ್ತಿರ.... ಎತ್ತಿದ ತಲೆಗಳು ಹಾಗೇ ಬಿಗಿದವು... ಸೆಟೆಸಿದ್ದ ಎದೆಗಳು ಮುಂದೇಡಿದವು.

"ಲೋ ಸೋಮ್ಯಾ. ಬಾಗೋ ಇಲ್ ನೂಳೆಮಂಗ್ನೆ" ಗುಡುಗಿನಂತಾ ಧ್ವನಿ... ಗುಂಡಿನಂತಾ ಮಾತು...

ಒಂದ್ ಕ್ಷಣ ಶ್ರೀ ಶ್ರೀ ಸೋಮಪ್ಪನವರಿಗೆ, ಆ ಸುಡು ಬಿಸಿಲಲ್ಲೂ ಚಳಿ ಆಯ್ತು.. ಕೈ-ಕಾಲುಗಳು ಅಸ್ಥಿರವಾದವು.. ಕಣ್ಣು ಕತ್ತಲೆ ಕಟ್ಟಿ ದಂಗಾಯ್ತು... ತಲೆ ಮತ್ತಷ್ಟು ತಗ್ಗಿತು... ಬೆನ್ನು ಮತ್ತಷ್ಟು ಬಾಗಿತು, ಕಾಲುಗಳು 'ಧನಿ'ಯ ಬಳಿಗೆ ಚಲಿಸಿದವು. ಕೈಗಳು ವಿನೀತವಾಗಿ ಮುಗಿದುಕೊಂಡವು...

"ಏನಲೇ ಮಗ್ನೇ! ಈಸ್ಕೊಂಡಿದ್ದ ಸಾಲ ಹಿಂದಕ್ ಕೊಡ್ಬೇಕಂತ ಏನಾರ ಜ್ಞಾನ ಐತೋ ಇಲ್ವೋ?"

ಒಂದೇ ಸಲಕ್ಕೆ ಸೋಮಪ್ಪನವರಿಗೆ ಕಣ್ಣುಕತ್ಲೆ ಬಂದಂಗಾತು "ಥೂ ಹಲ್ಕಾ ನನ ಮಗ್ನೆ" ಅಂತ ಮನ್ನಲೇ ಬಯ್ಕೊಂಡ್ರು, ಇಸ್ಕೊಂಡಿದ್ದು ನೂರು ರೂಪಾಯಿ, ಆರ್ ವರ್ಷದಿಂದ್ ಗೇಯ್ತಿದ್ರೂ ತೀರ್ಲಿಲ್ವೆ? ಮನದಾಗಿನ ಮಾತು ತುಟಿ ಹಾರಿ ಬರ್ಲಿಲ್ಲ.

"ಯಾಕಲ್ಲಾ ಹಂಗ್ ಕಂಬ ನಿಂತ್ಹಂಗೆ ನಿಂತೆ? ಇಕಾ ನೋಡ್ ಸೋಮ್ಯಾ! ಇನ್ ಹದಿನೈದು ದಿನ ಟೈಂ ಕೊಟ್ಟಿದ್ದೀನಿ. ಅಷ್ಟರಲ್ಲಿ ಕೊಡೋ ದಿದ್ರೆ ಕೊಡು. ಇಲ್ಲಿದ್ರೆ ನಿವ್ ವ್ಕ ಚರ್ಮ ಸುಲ್ದು ನಿನ್ ಬಾಡ್ನ ಕಿತ್ತು ಊಟ ಮಾಡ್ಬಿಡ್ತೀನಿ ತಿಳ್ಕಾ!"

ಶ್ರೀ ಶ್ರೀ ಸೋಮಪ್ಪನವರಿಗೆ ಎದೆಯಲ್ಲಿ ಛಳಿ ಹೊಕ್ಕಂಗಾತು, ತೊಳ್ಳೆ ನಡುಗಿತು. ಕಣ್ಣು ಕತ್ಲಾದ್ಹಂಗೆ ಹಾಗೆ ಮೇಲಿದ್ ಬೆವರ್ನ ಒರಸಿಕೋತಾ ತಮ್ಮಿಂದ ದೂರಾ ಹೋಗ್ತಿದ್ದ ಗೌಡ್ರು ಚಪ್ಲಿ ನೋಡ್ತಾ ನಿಂತ್ಕಂಡ್ರು.

ಅಂದೂ ಗೌಡ್ನ ಗದ್ದೆ ತಾವ್ಕೆ ಶ್ರೀ ಶ್ರೀ ಸೋಮಪ್ಪನವರು ಬರುವ ಹೊತ್ತಿಗಾಗಲೇ ಎಂಕ, ಕರಿಯ, ಚನಿಯ, ತಮ್ಮ ತಮ್ ಕೆಲ್ಸ ಪ್ರಾರಂಭಿಸಿದ್ರು. . ಗದ್ದೆ ಬದುವ್ನಾಗೆ ನಿಂತ ಆ ಸೂಳೇಮಗ ಗೌಡ ನಿಂತ್ಕಂಡ್ ಹಲ್ಲಾಗೆ ಹುಲ್ಲುಕಡ್ಡೀ ಜೊತೆ ಆಟ ಆಡ್ಲಿಕ್ ಬಿಟ್ಟಿದ್ದ... ಕಣ್‌ಗಳ್ ಮಾತ್ರ, ಅಲ್ಲೀ ಕಳೆ ಕೀಳ್ತಿದ್ ರಂಗಿ ಮ್ಯಾಗೆ... ಈ ನನ್ಮಗ ಗೌಡನ್ ನಾಲ್ಗೆ ಯಾವಾಗ್ಲೂ ಹೊಸ ಹೊಸಾ ತಿಂಡಿ ಮೇಲೆ ಕಣ್ಣು...ನಿಧಾನವಾಗಿ ಪಂಚೆ ಎತ್ತಿಕಟ್ಟಿ ಶ್ರೀ ಶ್ರೀ ಸೋಮಪ್ಪನವರು ಸಿದ್ಧವಾದ್ರು.

"ಎಷ್ಟೊತ್ತಿಗಪ್ಲಾ ಸೂಳೇಮಗ್ನೆ ಬರೋದು?" ಗೌಡ ಆರ್ಭಟಿಸಿದ

ಸನ್ಯಾಸ್ಯ ಸೋಮಪ್ಪನವರಿಗೆ ಛಳಿ ಆಯ್ತು....ತಲೆ ಕೆರ್ಕತಾ ನಿಂತ್ರು ಅದ್ನ ನೋಡಿ ಗೌಡಂಗೆ ಇನ್ನೂ ಸಿಟ್ ಬಂತು...ತನ್ ಮಾತಿಗೆ ಉತ್ರ ಕೊಡ್ದೇ ಈ ಹೊಲಿ ನನ್ಮಗ ನಿಲ್ಲೋದಾ!

"ರಿಟಾಡಿಸಿ ಎದೆಗ್ ವದೀತೀನಿ, ಬೋಳಿಮಗ್ನೆ ಅಂಗೇ ನಿಂತ್ಕಂಡ್ರೆ ಕೆಲ್ಸ ನೋಡೋ"

ಮಹಾನ್ಯ ಸೋಮಪ್ಪನವರು ಮಾತಾಡ್ಲಿಲ್ಲ—ತಮ್‌ಪಾಡ್ಗೆ ತಾವು ಪಿಕಾಸಿ ಎತ್ತಿ ಎತ್ತಿ ಹಾಕೋಕೆ ಪ್ರಾರಂಭಿಸಿದರು...ಮಳೇಲಿ ನೆಂದ ನೆಲ— ಸ್ವಲ್ಪ ಶಕ್ತಿ ಬಿಟ್ಟು ಹಾಕಿದ್ರೂ ಸಾಕು—ತ್ರಕ್ ಅಂತ ವಳಗೋಯ್ತಿದೆ... ಮತ್ತೇನೋ ನೆನಪಾಗಿ ಕಿಸಕ್ಕನೆ ನಕ್ರು, ಶ್ರೀ ಶ್ರೀ ಸೋಮಪ್ಪನವರು.

"ಅದೇನ್ ಅಂಗ್ ಕಿಸೀತಿದ್ದೀಯೋ, ಮನೆ ಹಾಳ್ ನನ್ಮಗ್ನೆ" ಗೌಡ ಕಿರುಚಿದ.

ಈ ಗೌಡಂಗೆ ಬಯ್ಯೋದು ಅಂದ್ರೆ ಕಜ್ಜಿ ಕೆರ್ಕಂಡಂಗೆ. ಬಯ್ಕೊಳ್ಳಿ ಈ ನನ್ಮಗ, ಅಂದ್ಕಂಡು ಶ್ರೀ ಶ್ರೀ ಸೋಮಪ್ಪನವರು ಅಂಗೇ ಕೆಲ್ಸ ಮುಂದುವರ್ಸಿದ್ರು. ಎತ್ತಿ ಎತ್ತಿ ಪಿಕಾಸಿ ಹಾಕ್ತಿದ್ದಾರೆ...ಮಣ್ಣಿಗೆ ಏನೋ ತಾಕಿದಾಗೆ ಆಯ್ತು...ಸುತ್ತ ನೋಡಿದ್ರು...ಎಲ್ರೂ ಕೆಲ್ಸ ಮಾಡ್ತಿದ್ದಾರೆ. . ಗೌಡ್ನ ಕಣ್ಣು, ಮನಸ್ಸು ಎಲ್ಲಾ ರಂಗಿ ಮ್ಯಾಕೆ ನಟ್ಟೋಗದೆ...ಶ್ರೀ ಶ್ರೀ ಸೋಮಪ್ಪನವರನ್ನ ಈಗ ಯಾರೂ ಗಮನಿಸುತ್ತಿಲ್ಲ...ನಮ್ಮ ನಾಯಕರು

ಜಾಗ್ರತರಾದರು. ಕಿಟಕಿಯಿಂದ ಶಬ್ದ ಬಂದತ್ತ ಸರಿಯಾಗಿ ಕಣ್ಣಾಗಲಿಸಿ ನೋಡಿದರು.... ಏನೋ ಕಂಡಂಗಾತು... ಉಂಗುರದಂಗೈತಿ... ಮಣ್ಣಾ ಎತ್ತಿ ಹಾಕುತ್ತಿರುವಂತೆ ಬಗ್ಗಿದ ಶ್ರೀ ಶ್ರೀ ಸೋಮಪ್ಪನವರು, ಅಂದೇ ಸರಿಯಾದಿ ನೋಡಿದರು...ಹೌದು! ಒಂದು ಉಂಗುರ...ಗೌಡ್ರ ಕೈಯ್ಯಾಗೆ ಐತಲ್ಲ. ಅಂತಾ ಉಂಗ್ರಾನ? ಅಂತ ಆಸೆಯಿಂದ ನಮ್ಮ ನಾಯಕರ ಹೃದಯ ಬಾಯಿಗೆ ಬಂದಂಗಾತು...ಕೈಗೆ ತಗಂಡು ಅಂಗೇ ನೋಡಿದ್ರು.. ತುಂಬಾ ಭಾರ ಐತೆ..ನೋಡ್ದ್ರು! ಅಂತ ಅಂಗೇ ಮೆತ್ಗೆ ಆ ಉಂಗ್ರ ತಗಂಡು ಜೋಬ್ಗೆ ಇಳಿಬಿಟ್ರು.

ಸೋಮಪ್ಪನವರಿಗೆ, ಕ್ಷಮಿಸಿ! ಶ್ರೀ ಶ್ರೀ ಸೋಮಪ್ಪನವರಿಗೆ ಈಗ ಕುತೂಹಲ. ಆ ಉಂಗ್ರ ಚಿನ್ನದಾದ್ರೆ ಏನ್ ಮಾಡೋದು? ಪೇಟೇಗ್ ಹೋಗಿ ಆ ಮಾರ್ವಾಡಿ ಅತ್ರ ಮಾರಿದ್ರೆ ಒಂದೈವತ್ತು ರೂಪಾಯಿ ಆದ್ರೂ ಕೊಡಬೌದು...ಆದ್ರೆ ತಾನು ಬಂದ್ ಉಂಗ್ರ ಹಾಕ್ಕೋಬೇಕು ಅಂತ ಆಸೆ ಐತೆ... ಆದ್ರೆ ಆ ಉಂಗ್ರ, ಆಕ್ಕೊಂಡಾಗ, ಅದ್ನ ಬೇರೇ ಅವ್ರು ನೋಡಿ, ಎಲ್ಲಿಂದ್ ಬಂತಂತ ಕೇಳಿದ್ರೆ ಏನಂತಾ ಹೇಳ್ಬೇಕು! ಕಳ್ಳ ಅಂತ್ ಪೊಲೀಸ್‌ನವ್ರು ನನ್ ಹಿಡ್ಕಂಡ್ರೆ? ಪೊಲೀಸ್ ನೆನಪಾಗಿದ್ದಂತೆಯೇ ಶ್ರೀ ಶ್ರೀ ಸೋಮಪ್ಪನವರಿಗೆ ತೊಳ್ಳೆ ನಡುಕ ಪ್ರಾರಂಭ ಆಯ್ತು... ಯೋಚ್ನೆ ಮಾಡಿ ಮಾಡಿ ತಲೆ ಕಾದೋತು.. ಕೈಗಳು ಮಾತ್ರ ಯಂಥಾ ಪ್ರಕಾರ ಯಂತ್ರದಂತೆ ಕೆಲ್ಸ ಮಾಡ್ತಾನೆ ಇತ್ತು... ಹೊತ್ತು ಮುಳುಗ್ತಾ ಬಂದ್ರೂ ಅವ್ರ ತಲೀಗ್ ಹೊಳೀಲಿಲ್ಲ

ಬೆಟ್ಟದಷ್ಟು ಆಸೆ ತುಂಬ್ಕಂಡ್ ನಮ್ಮ ನಾಯಕರಾದ ಶ್ರೀ ಶ್ರೀ ಸೋಮಪ್ಪನವರು ಕೂಲಿ ತಗಂಡು, ಪಡಾಯಿಖಾನೆಗೆ ಹೋಗ್ದೆ ಸೀದಾ ಆಚಾರಿ ಅತ್ರ ಹ್ವಾದ್ರು.. ರಾಮಾಚಾರ್ರು ಅಂದ್ರೆ, ಆ ಸುತ್ಲ ಹತ್ತೂ ಹಳ್ಳೀಗೆಲ್ಲಾ ಒಬ್ರೇ.... ಮೋಸ, ವಂಚ್ನೆ ಇಲ್ಲ... ನ್ಯಾಯವಂತ ಅಂತ ಜನ ಹೇಳ್ತಾರೆ...ನಂಬಿಕೆ ಇಡಬಹುದಾದ ಮನುಷ್ಯ... ರಾಮಾಚಾರಿ ಅಂಗಡಿಗೆ

ಹುಗೂನ್ ಕಳ್ಸಿದ್ರೂ ಮೋಸ ಇಲ್ಲಾಂತ ಪ್ರತೀತಿ... ಅಂತಾ ಸತ್ಯವಂತ ಆಚಾರಿಗಳ ಅಂಗಡಿಯತ್ರ ಶ್ರೀ ಶ್ರೀ ಸೋಮಪ್ಪನವರು ಪಾದ ಬೆಳೆಸಿದರು.

ಬೆಂದಊರಿನಲ್ಲಿ ದೀಪ ಹೊತ್ತಿಸೊ ಸಮಯ ಆಯ್ತು, ಅಂದ್ರೆ ಮುಂದೀತು.. ಜನ ರಸ್ತೆಯಿಂದ ತಮ್ ತಮ್ ಮನೆ ಸೇರ್ಕಂತಾರೆ, ಕೆಲವ್ರು ಕದ್ದು ನಾದಾಸಾನಿ ಮನೆಗೂ ಸಹಾ! ಕರಿಯ, ತಿಮ್ಮ ಮುಂತಾದ ಕಸುಬಿನವರಿಗೆ ಕೈ ಚಳಕ ತೋರಿಸೊ ಸಿದ್ಧತೆ ನಡೆಸುವ ತವಕ, ನಮ್ಮ ಶ್ರೀ ಶ್ರೀ ಸೋಮಪ್ಪನವರಂತಹಾ ಮಹಾ ಮಾನ್ಯರಿಗೆ ಶರಾಬು ಗಂಗಣ್ಣ ನವರಲ್ಲಿ ವಿಶೇಷ ಕಾರ್ಯ ಇರುತ್ತದೆ... ಇಂತಹ ಕೆಲವರು ಮಾತ್ರ ಆ ಕತ್ತಲಿನ ರಾಜ್ಯದಲ್ಲಿ ಓಡಾಡೋ ಮಿಣುಕು ಹುಳುಗಳು... ರಾಮಾಚಾರಿ ಗಳೂ ಕೂಡಾ ಎದ್ದು ತಮ್ಮ ಕನ್ನಡಕ ಮಡಿಸಿಟ್ಟು ಮೈ ಮುರಿಯುತ್ತಾ ಅಂಗಡಿ ಕದ ಹಾಕುವುದರಲ್ಲಿದ್ದರು. ಆ ಸಮಯಕ್ಕೆ ಸರಿಯಾಗಿ ನಮ್ಮ ನಾಯಕರ ರಂಗ ಪ್ರವೇಶ.

ರಾಮಾಚಾರಿ ತಲೆ ಎತ್ತಿ ನೋಡಿದ. ಮಾನ್ಯ ಶ್ರೀ ಶ್ರೀ ಸೋಮಪ್ಪ ನವರು. ಇರುವೆಗೆ ಕಬ್ಬಿಣದ ಅಂಗಡಿಯಲ್ಲಿ ಏನು ಕೆಲಸ? ಆದ್ರೆ ಈ ಮಹರಾಯನೂ ಮಾತಾಡ್ತಿಲ್ಲ.. ಸುಮ್ನೆ ತಲೆ ಕೆರ್ಕ್ಯತಾ ನಿಂತವ್ನೆ ಮಾಮೂಲಿನಂತೆ ಸಾಲಕ್ಕೆ ಬಂದಿದ್ದಾನೆ...? ಬಗೆಹರಿಯಲಿಲ್ಲ.

"ಏನಪ್ಪಾ! ಏನ್ ಸಮಾಚಾರ?"

ಮಾನ್ಯ ಸೋಮಪ್ಪನವರು ಒಮ್ಮೆ ಸುತ್ತಮುತ್ತ ನೋಡಿದ್ರು... ಆಚಾರೀನ್ ಹೊರ್ತರ್ಪಡ್ಸಿ ಮತ್ಯಾರು ಇಲ್ಲ... ಸ್ವಲ್ಪ ಧೈರ್ಯ ಬಂತು ಸೊಂಟದ ಗಂಟು ನಿಧಾನವಾಗಿ ಬಿಚ್ಚಿದ್ರು.

ರಾಮಾಚಾರಿ ನೋಡ್ತಾನೆ ಇದ್ದ... ಸನ್ಮಾನ್ಯ ಶ್ರೀ ಶ್ರೀ ಸೋಮಪ್ಪ ನವರ ತೆಗೆದ ಸೊಂಟದ ಗಂಟಿನಲ್ಲಿ ಮಣ್ಣು ಮೆತ್ತಿದ ಒಂದು ಉಂಗ್ರ.

"ಏನಲೇ! ಇದೆಲ್ ಸಿಗ್ತೋ ನಿಂಗೆ?"

ಮತ್ತೆ ದಾಬರಿಯಿಂದ ಶ್ರೀ ಶ್ರೀ ಸೋಮಪ್ಪನವರು ಅತ್ತ ಇತ್ತ ನೋಡಿದ್ರು. ನಂತ್ರ ಅವ್ರ ಮುಖಾಭಿನಯ ಪ್ರಾರಂಭ ಆಯ್ತು. ಗಟ್ಟಿ

ಯಾರಿ ಬಾಯಿಬಿಟ್ರು ಹೇಳಿದ್ರೆ, ಎಲ್ಲಿ ಯಾರು ಕೇಳಿಸ್ಕಂಡ್ ಬಿಡ್ತಾರೆ ಅಂತ ಭಯ. ಮಧ್ಯೆ ಒಂದೊಂದೇ ಅಕ್ಷರ ರೂಪಿ ಪದಗಳು... ಶ್ರೀ ಶ್ರೀ ಸೋಮಪ್ಪನವರು ಏನ್ ಹೇಳ್ತಿದ್ದಾರೆ, ಅಂತ ಅರ್ಥ ಮಾಡ್ಕೋಬೇಕಾದ್ರೆ ರಾಮಾಚಾರಿಗೆ ಯೋಗ ಮಾಡಿದಂಗಾತು.

"ಗದ್ದೇಲಿ ಸಿಕ್ತೇನಪ್ಪ! ಗೌಡ್ರುದಿರಬ್ಬೇದು ಇದು" ರಾಮಾಚಾರಿ ಹೇಳಿದ್ ಮಾತೇ ಮಾನ್ಯ ಸೋಮಪ್ಪನವರಿಗೆ ಭಯ ಇನ್ನೂ ಹೆಚ್ಚಾಗುವಂತೆ ಮಾಡ್ತು.. ಶ್ರೀ ಶ್ರೀ ಸೋಮಪ್ಪನವರಿಂದ ಆ ಉಂಗ್ರ ಕೊಂಡ ರಾಮಾಚಾರಿ, ಅದಕ್ಕೆ ಮೆತ್ತಿಕೊಂಡ ಮಣ್ಣು ಹೋಗುವಂತೆ ಉಫ್ ಅಂತ ಉರುಬಿದ. ಅವರ ಅನುಭವಿ ಕಣ್ಣು, ಕೈಗಳಿಗೆ ಆ ಉಂಗ್ರ ಹಿತ್ತಾಳೇದು, ಅಂತ ಗೊತ್ತಾಗ್ಲಿಕ್ಕೆ ಹೆಚ್ಚು ಸಮಯ ಹಿಡೀಲಿಲ್ಲ.. ಸ್ವಲ್ಪ ನಿರಾಶೆಯೂ ಆಯ್ತು. ಶ್ರೀ ಶ್ರೀ ಸೋಮಪ್ಪನವರ ಕೈಗೆ ಆ ಉಂಗ್ರ ಹಿಂದಕ್ಕೆ ಕೊಡ್ತಾ ಹೇಳಿದ್ರು—

"ಹಿತ್ತಾಳೇದು ಕಂಡ್ರಾ.. ನಾಲ್ಕಾಣೆಯೂ ಬರೋದಿಲ್ಲ" ಮಾನ್ಯ ಸೋಮಪ್ಪನವರಿಗೆ ಎತ್ತಿ ಕುಕ್ಕಿದಂಗಾತು.. ಛೇ! ಛೇ! ಅದ್ರ ಬಗ್ಗೆ ಎಷ್ಟು ಕನಸು ಕಂಡಿದ್ರು—ಅದು ಇಂಗಾಗೋಯ್ತಲ್ಲ! ತತ್ತೇರಿ ಅಂದ್ಕಂಡ್ರು.. ಮತ್ತೇನೂ ಮಾಡ್ಲಿಕ್ಕೆ ಗೊತ್ತಾಗ್ದೇ ತಮ್ ಕೈಗೆ ಹಾಕ್ಕೊಂಡ್ರು.. ಎಲಾ! ಎಲಾ! ತಮ್ ಕೈದ ಹೇಳಿ ಮಾಡ್ಸಿದಂಗಿದೆ. ಕುಸಿ ಆತು.. ಆಚಾರಿಗೆ ಒಂದು ಡೊಂಕು ಸಲಾಮು ಕೊಟ್ಟು ಗಂಗಣ್ಣನ ಅಂಗ್ಡಿ ಕಡೆ ಹೊಂಟ್ರು.

ಶ್ರೀ ಶ್ರೀ ಸೋಮಪ್ಪನವರು ಮನೆ ಕಡೆ ಬಂದಾಗ ಆಗ್ಲೇ ಹನ್ನೆರಡು ದಾಟಿತ್ತು. ಮನಿ ಹೊರಗಿನ ಪುಟ್ಟ ಅಂಗಳದಲ್ಲಿ ಮಕ್ಕು ಮಲಗವ್ರೆ.. ಬಾಗ್ಲಲ್ಲಿ ಗೌಡ್ನ ದಿರಕಿ ಚಪ್ಲಿ...ಒಳ್ಗೆ ಸಣ್ಣ ದೀಪ. ಈಗ ಆರೊಲ್ಲೇ, ಮತ್ತೊಂದ್ ಕ್ಷಣಕ್ ಆರೊಲ್ಲೇ... ಶ್ರೀ ಶ್ರೀ ಸೋಮಪ್ಪನವರಿಗೆ ಮತ್ತೇನನ್ನೂ ಬಿಡಿಸಿ ಹೇಳ್ಬೇಕಾದ್ದಿಲ್ಲ...ಇವತ್ತು ರಾತ್ರಿ ತನಗೂ ಈ

ಅಂಗ್ಯವೇ ಗತಿ...ಎಷ್ಟೋ ಸರ್ತಿ ಬರೋಹಂಗೆ ಅವತ್ತೂ ಮಾನ ಸೋಮಪ್ಪನವರಿಗೆ ಕೋಪ ಬಂತು. ಗಂಗಣ್ಣನ್ ತೀರ್ಥ ಬೇರೆ ಹೊಟ್ಟೆ ಒಳ್ಗೆ ಕೆಲ್ಸಾ ಮಾಡ್ತಿತ್ತು. ಹಾಗಾದ್ರೆ ಈಗ ನಮ್ಮ ನಾಯಕರು ಏನು ಮಾಡ್ಬೋದು? ಓದುಗಾ! ನಂಗೊತ್ತು, ನೀನೀಗ ರಾಜ್‌ಕುಮಾರ್ ಅಥ್ವಾ ಎಂಜಿಆರ್ ಕಲ್ಪನೆ ಮಾಡ್ತಿದ್ದೀ ಅಂತ...ಆದ್ರೆ ಶ್ರೀ ಶ್ರೀ ಸೋಮಪ್ಪನವರು ಅಂಗೆಲ್ಲಾ ಏನೂ ಮಾಡ್ಲಿಲ್ಲ...ಯಾಕಂದ್ರೆ ಅವ್ರು ಮಾನ್ಯ ಸೋಮಪ್ಪನವರು ಆಗಿದ್ರು...ಇನ್ನು ಇದು ಹೊಸಾ ಸಂಗ್ತೀನೂ ಅಲ್ಲ...ಅಂಗಳದಲ್ಲಿ ಮಲಗಿರೋ ಮಕ್ಳು....ಈ ಮಕ್ಳಲ್ಲಿ ತಮ್ಗೆ ಹುಟ್ಟಿದ್ದೆಷ್ಟು? ಗೌಡ್ರುದ್ ಎಷ್ಟು? ಉತ್ರ ಸ್ವಲ್ಪ ಕಷ್ಟಾನೆ...ಎಲ್ಲಾ ನಮ್ ಗ್ರಾಚಾರ.

ಗಂಗಣ್ಣನ್ ತೀರ್ಥ ಇವತ್ತ್ ಸ್ವಲ್ಪ ಜಾಸ್ತಿ ಆಗಿತ್ತು ಅನ್ಸುತ್ತೆ. ಶ್ರೀ ಶ್ರೀ ಸೋಮಪ್ಪನವರಿಗೆ ಅಲ್ಲೇ ಮಲಗ್ಲಿಕ್ಕೆ ಪ್ರಯತ್ನ ಪಟ್ರೂ ನಿದ್ದೆ ಬರ್ಲಿಲ್ಲ... ಎಲ್ಲೋ ಗಾಳೀಲಿ ತೇಲಿ ಹೋದಂಗೆ. ಸೀದಾ ನಡ್ಕೋತಾ ಹೋದ್ರು, ಹೋದ್ರು, ಹೋದ್ರು, ಹೋಗೇ ಹೋದ್ರು...ಎಲ್ಲಿಗೆ?

ನಡೆದೂ, ನಡೆದೂ, ಶ್ರೀ ಶ್ರೀ ಸೋಮಪ್ಪನವರಿಗೆ ಕಾಲುನೋವು ಬರೋದಿಕ್ಕೆ ಶುರು ಆತು. ಸುತ್ತಾ ನೋಡಿದ್ರೆ ಆಗ್ಲೇ ತಾನು ಬೆಂದೂರಿನ ಹೊರಗೆ ಬಂದಿದ್ದಾರೆ... ಅಲ್ಲೆಲ್ಲಾ ಬರೀ ಹುಣಸೇ ಮರಗಳು ಸುತ್ತ ನೋಡ್ತಂತ್ಲೇ ಅವ್ರಿಗೆ ಭಯ.... ಆದರೆ, ಆ ಭಯ ಒಂದೇ ನಿಮಿಷ. ಬಹುಶಃ ಗೌಡನ್ ಮುಖ ಅವ್ರಿಗೆ ನೆನಪಿಗೆ ಬಂದಿರ್ಬೇಕು... ಭೂತದ ಭಯ ಹೋಯ್ತು... ಗೌಡನ್ ಮೀರ್ಸಿದ್ ಭೂತ ಇನ್ಯಾವುದಿದೆ? ಅಂದ್ಕೊಂಡಿರ್ಬೇಕು... ಒಂದು ಮರದ್ ಬುಡದಲ್ಲಿ ಆರಾಮವಾಗಿ ಕಾಲು ಚಾಚಿದ ನಮ್ಮ ನಾಯಕರು ಅಂಗೇ ನಿದ್ರಿಸಲು ಪ್ರಯತ್ನಿಸಿದರು. ಉಹುಂ! ಏನ್ಮಾಡಿದ್ರೂ ನಿದ್ದೆ ಇಲ್ಲ ಛಳಿ ಆಗ್ತಾ ಇದೆ. ತನ್ ದೇಹಕ್ಕೆ ಏನೇನೋ ಬೇಕು ಅನ್ಸುತ್ತೆ. ಹಾಗಂತ ಅಂದ್ಗೊಂತ್ತಿದ್ದಂತೆಯೇ ಹೆಂಡ್ತಿ ನೆನಪಾದ್ಳು... ಥೂತ್, ದರಿದ್ರ ಮುಂಡೆ, ಕಟ್ಕೊಂಡ್ ಗಂಡ ನಾನು ಇಲ್ಲಿ ಚಳಿಗೆ ನಡುಗ್ತಾ ಬಿದ್ದಿವ್ನಿ, ಅವ್ಳಲ್ಲಿ ಹಾಯಾಗಿ ಗೌಡ್ನ ಮೈ ಬೆಚ್ಚಗ್ ಮಾಡ್ತಾ ಅವ್ಳೆ... ಮಾನ್ಯ ಸೋಮಪ್ಪನವರ ಪ್ರಯತ್ನ ಏರಿ ಚಳಿಗೋ, ಸಿಟ್ಟಿಗೋ, ಅಂತೂ

ಅವ್ರು ಹಳ್ಳಿಂದ ಕಟಕಟಾಂತ ಸದ್ದು ಹೊರ ಬಂದಿತ್ತು, ಅಲ್ಲಿ ಆ ಗೌಡ ನನ್ಮಗನ್ ಏನ್ಮಾಡ್ತೇಕೊಂತಿನಿ.., ಕಟ್ಕೊಂಡು ಗೌಡ್ರು ಮುಸ್ಕ್ಯಾಗ್ ಅವ್ನೇ... ನೋಡಿದ್ರೆ ಒಳ್ಳೆ ರಸಪುರಿ ಮಾವಿನ್ ಹಣ್ಣು... ಯಾರಾದ್ರೂ ನೋಡಿದ್ರೆ ಅಂಗೇ ಕಚ್ಚಿ ತಿನ್ಬೇಕು, ಅನಿಸ್ತದೆ... ಅಂತೂ ಗೌಡ್ರುನ್ ಉಸ್ನೋ ಅನ್ನಿ, ರಂಗಿ, ತಿಮ್ಮಿ, ನಾಗಸಾನಿ, ಕಡೆಗ್ ತನ್ ಎಂಡ್ತಿ- ಎಲ್ಲಾ ಎಣ್ಣು ಬೇಕಲ್ಲ ಅವ್ನಿಗೆ.. ಕೂಲಿ ಕೆಲ್ಸ ಮಾಡೋ ನಾವು ಅಂದ್ರೆ ಅಷ್ಟು ಸಸಾರನಾ ಆ ಮುಂಡ್ರುಗಂಟ್ಟಿದವನಿಗೆ... ನವರ್ ಎಂಡ್ರ ರುಚಿ ಅವ್ನು ನೋಡ್ಕೋಬೇದಂತೆ, ಅವ್ನ ಎಂಡ್ತಿ ರುಚಿ ನಾನ್ಯಾಕ್ ನೋಡ್ಬಾರ್ದು... ಈಗೊಂದ್ ವೇಳೆ ಗೌಡ್ರು ನನ್ ಕೈಗೆ ಸಿಕ್ರು...

ಸಿಟ್ಟಿನಿಂದ್ಲೋ, ಅಸಹಾಯಕತೆಯಿಂದ್ಲೋ, ಅಂತೂ ನಮ್ಮ ನಾಯಕರ ತಲೆ ಎಲ್ಲೆಲ್ಲೋ ಓಡ್ತಿತ್ತು. ಉಂಗ್ರ ಹಾಕ್ಕೊಂಡ್ ಬೆರಳಿಗೆ ಏನೋ ಮುಜುಗರ.. ಅಭ್ಯಾಸವಿಲ್ಲವಲ್ಲ, ಅದಕ್ಕೆ ಕಡಿದಂಗಾಗ್ತೆ, ಅಂತ ಅದ್ನ ಯಾಂತ್ರಿಕವಾಗಿ ತಿಕ್ಕೋಕೆ ಶುರು ಮಾಡಿದ್ರು... ಒಂದು, ಎರಡು, ಮೂರು ಮೇಲೆ, ಕೆಳಗೆ, ಮೇಲೆ, ಕೆಳಗೆ, ಏನೋ ಅನ್ನಿಸ್ತು.. ಆ ಉಂಗ್ರಾನೇ ಗೌಡ್ರು ಬಂದ್ಕೊಂಡ್.. ಶ್ರೀ ಶ್ರೀ ಸೋಮಪ್ಪನವರು ಅತ್ಯುತ್ಸಾಹದಿಂದ ತಿಕ್ಕೋಕೆ ಶುರು ಮಾಡಿದ್ರು, ಏಳು, ಎಂಟು, ಒಂಭತ್ತು ಹತ್ತು...

ಫಳ್ ಅಂತ ಅಕಸ್ಮಾತ್ತಾಗಿ ಮಿಂಚು ಹೊಡೆದಂಗಾಯ್ತು. ಭಯದಿಂದ ತಕ್ಷಣ ಸೋಮಪ್ಪನವರು ಕಣ್ಣು ಮುಚ್ಕಂಡ್ರು....ಎದುರ್ಗೆ ಕಂಡದ್ದನ್ನ ನೆನಸಿಕೊಂಡು, ಚಡ್ಡೀ ಒಳಗೆ ಒದ್ದೇ ಆಯ್ತು...ಮೊದ್ಲೇ ಹುಣಸೀ ತೋಪು...ಜೊತೆಗ್ ಆಗ್ಲೇ ಮಧ್ಯರಾತ್ರಿ— ಗುಡುಗಿನ್ ಶಬ್ದ ಬೇರೆ, ಕೇಳ್ತಾ ಇದೆ— ಗುರುಗುರು ಗುರುಗುರು ಅನ್ತಿದೆ—ಒಳ್ಳೇ ಗೌಡ್ರ ಅರ್ಭಟಕ್ಕಿಂತಾ ಹೆದ್ರಿಕೆ ಆಗುತ್ತೆ.

ಕೆಲವು ನಿಮಿಷ ಆದಂಗಾಯ್ತು— ಶ್ರೀ ಶ್ರೀ ಸೋಮಪ್ಪನವರು ಮುಚ್ಚಿದ ಒಂದು ಕಣ್ ಓರೆ ಮಾಡಿ ನೋಡಿದ್ರು—ಮತ್ತೆ ಗುಂಡಿಗೆ ಒಡೆದ ಹಾಗೆ ಆಯ್ತು—ಎದುರಿಗೇ ಇದೆ ಭೂತ—ಬಾಚಿದ ಕೋರೆ

ಹಲ್ಲು, ಬೆಂಕಿ ಉಂಗಿರೋ ಕಣ್ಣುಗಳು.. ಕಾಲಿನ್ ಕಡೆ ನೋಡಿದರೆ, ಹಿಂದು ಮುಂದಾಗಿ, ಮುಂದು ಹಿಂದಾಗಿ ಕಾಣಿಸ್ತಿವೆ.. ಕೈ-ಕಾಲುಗಳ ಉಗುರುಗಳೇ ನಾಲ್ಕು ಅಡಿಗಳಷ್ಟು ಉದ್ದ ಇತ್ತು ಅಂದ್ರೆ ಒಟ್ಟು ದೇಹ ಎಷ್ಟು ದೊಡ್ಡಿತ್ತು ಅಂತ ನಾವೇ ಊಹೆ ಮಾಡಿಕೊಬೇಕು...

ಶ್ರೀ ಶ್ರೀ ಸೋಮಪ್ಪನವರು ಕಣ್ಣು ಬಿಟ್ಟು ನೋಡಿದರು... ಆಶ್ಚರ್ಯ! ಆ ರಾಕ್ಷಸಾಕಾರ ಉದ್ದಕ್ಕೂ ಮಲಗಿ ಅದರ ತಲೆಯನ್ನ ತಮ್ಮ ಕಾಲ ಬಳಿ ತಂದಿದೆ. ಅದರ ಕೈಗಳು ತಮ್ಮ ಶ್ರೀಪಾದವನ್ನ ಮುಟ್ಟಿ ನಮಸ್ಕರಿಸುತ್ತಿದೆ... ಸೋಮಪ್ಪನವರ ಎದೆ ನಗಾರಿ, ಆದ್ರೂ ಕೊಂಚ ಧೈರ್ಯ ಬರಲಾರಂಭಿಸಿತು. ಜೊತೆಗೆ ಗಂಗಣ್ಣನ ತೀರ್ಥ ಬೇರೆ ಇವರ ಬೆಂಬಲಕಿತ್ತಲ್ಲಾ... ಆದ್ರಿಂದ ಅರೆಹೆದರಿಕೆಯಿಂದಲೇ ಆ ಆಕಾರವನ್ನು ಪ್ರಶ್ನಿಸಿದರು.

"ನೀ... ನೀ... ನು... ಯಾ..., ಯಾ... ರು,..

"ನಾನು ಉಂಗುರದ ಗುಲಾಮ! ಏನಪ್ಪಣೆ"

ಅಂದ್ರೆ! ಈ ಭೂತ ತನ್ನ ಗುಲಾಮ, ಮಾನ್ಯ ಸೋಮಪ್ಪನವರಿಗೆ ಹಿಂದೆಲ್ಲೊ, ತಾವು ಬಾಳ ಚಿಕ್ಕವರಿದ್ದಾಗ ಅವ್ವ, ಅಜ್ಜಿ ಹೇಳಿದ್ ಕತೆ ಕೊಂಚ ಕೊಂಚ ನೆನಪಾಗತೊಡಗಿತು... ಯಾರೋ ಒಬ್ಬ ಹುಡುಗ. ಅವ್ನ ಹೆಸರೇನೊ ಮರೆತು ಹೋಗಿದೆ... ಅವ್ನ ಬಳಿ ಕೂಡಾ ಇಂತಾ ಒಂದ್ ಉಂಗ್ರ ಇತ್ತಲ್ಲ—ನಡುಗುವ ಧ್ವನಿಯಲ್ಲಿ ಕೇಳಿದ್ರು!

"ನಿ—ನೀ—ನ್ಯಾಕ್ ಇಲ್ಲಿಗ್ ಬಂದೆ!"

"ನೀವು ಉಂಗ್ರ ತಿಕ್ಕಿ ಕರೆದ್ರಲ್ಲಾ! ಅದ್ಕೆ? ನಾನು ಉಂಗುರದ ಗುಲಾಮ—ಹಿಂದೆ, ಸಾವಿರಾರು ವರ್ಷಗಳ ಹಿಂದೆ ನಂಗೊಬ್ಬ ಯಜಮಾನ ಇದ್ದ—ಅಲ್ಲಾವುದ್ದೀನ ಅಂತ. ಅವ್ನ ಕೈಯಲ್ಲಿ ಇದ್ದ ಉಂಗುರದ ಗುಲಾಮ ನಾನು. ಅವ ಒಮ್ಮೆ ಅವ್ನ ಹೆಂಡ್ರ ಜೊತೇಲಿ ನದೀಲಿ ಸ್ನಾನ ಮಾಡ್ತಿದ್ದ—ಆಗ ಉಂಗ್ರ ಬೆರಳಿಂದ ಜಾರಿ ನೀರಿಗೆ ಬಿದ್ಹೋಯ್ತು—ಅಲ್ಲಿಂದ ಕೆಸರಲ್ಲಿ ಸೇರಿ ಹೋಗಿ ಸಾವಿರಾರು ವರ್ಷ ಆತು. ನಿಮ್ ಗೌಡ್ರು

ಗಿಡ್ಡ ಇದ್ಯಲ್ಲಾ, ಹಿಂದೆ ಅದ್ರಲ್ಲಿ ನದಿ ಹರೀತಿತ್ತು—ಆ ನದಿ ಬಾಣಿ ಹೋಯ್ತು—ಉಂಗ್ರ ಮಾತ್ರ ಅಲ್ಲೇ ಮಣ್ಣಲ್ಲಿ ಮಣ್ಣಾಗಿತ್ತು—ಇವತ್ ನಿಮ್ಮ ಪಿಕಾಸಿಗೆ ಸಿಕ್ಕಿ ಉಂಗ್ರ ಮೇಲೆ ಬಂತು—ನೀವದನ್ನ ಹಾಕ್ಕೊಂಡ್ರಿ—ಸಾವಿರಾರು ವರ್ಷಗಳೇ ಆಗಿಹೋಗ್ತಿತಲ್ಲ—ನಾನು ನಿದ್ದೆ ಮಾಡ್ತಿದ್ದೆ—ಅದ್ಕೆ ನಾನು ಬರ್ಬೇಕಾದ್ರೆ ನೀವು ಅಷ್ಟೊಂದ್ ಸಲ ತಿಕ್ಬೇಕಾಯ್ತು— ಇನ್ ಪರ್ವಾಗಿಲ್ಲ—ಎಚ್ರ ಆಯ್ತು—ನೀವ್ ಒಂದ್ಸಲ ತಿಕ್ಕಿದ್ರೂ ಸಾಕು—ನಾನು ತಕ್ಷಣ ಬರ್ತೀನಿ."

ಮಾನ್ಯ ಸೋಮಪ್ಪನವರಿಗೆ ಏಷ್ಟು ಅರ್ಥ ಆಗೋದೇ ತುಂಬಾ ಕಷ್ಟಕ್ ಸಿಕ್ಕಾಕೊಂತು—ಆ ಭೂತ ಹೇಳಿದ್ದೆಲ್ಲಾ ಅರ್ಥ ಆಯ್ತು ಅಂತಲ್ಲ ಆದ್ರೆ ಇಷ್ಟು ಅರ್ಥ ಆಯ್ತು—ಆ ಭೂತ ತಮ್ಗೆ ಉಪದ್ರ ಮಾಡ್ಲಿಕ್ ಬಂದಿಲ್ಲ. ತಾವ್ ಹೇಳ್ದಂಗ್ ಕೇಳ್ಕಂಡ್ ಇರ್ತದೆ. ಹಾಗಿದ್ರೆ ಒಳ್ಳೇದೇ ಆಯ್ತಲ್ಲ.

"ಈಗ ಏನಪ್ಪಣೆ?"

ಭೂತ ವಿನೀತವಾಗಿ ಮತ್ತೆ ಕೇಳ್ತು—ಏನಂತ ಕೇಳೋದು? ಶ್ರೀ ಶ್ರೀ ಸೋಮಪ್ಪನವರು ತಲೆ ಕೆರ್ಕೊಂಡ್ರು—ಮಗ್ದ್ ಬೋಡ್ನ ಒತ್ತಾಕ್ತಾ ಇದೆ, ಛಳಿಗಾಳಿ ಬೇರೆ—ಬೆಚ್ಚಗ್ ಏನಾದ್ರೂ ಇದ್ದಿದ್ರೆ—

"ನಂಗೆ ಛಳಿ ಆಗ್ತಿದೆ—ಇಲ್ ಮಲ್ಗಾಕ್ ಏನೂ ಇಲ್ಲ"

"ಅಪ್ಪಣೆ"

ಭೂತ ಒಂದು ಕ್ಷಣ ಮಾಯಾ ಆಯ್ತು—ಸದ್ಯ ಹೋಯ್ತು, ಅಂತ ಉಸಿರು ಬಿಡುವಷ್ಟರಲ್ಲಿ ಮತ್ತೆ ಪ್ರತ್ಯಕ್ಷ ಆಯ್ತು—ಅದ್ರ ಒಂದ್ ಕೈಯಲ್ಲಿ ಒಂದು ಹಾಸ್ಗೆ, ಹೊದಿಕೆ, ಸೊಳ್ಳೆ ಪರದೆ ನೋಡ ನೋಡುತ್ತಿದ್ದಂತೆ ಒಂದು ಮಂಚವೂ ಪ್ರತ್ಯಕ್ಷ ಆಯ್ತು.

ಪಾತ್ಸರ ಬೇಡ ಓದುಗ! ಶ್ರೀ ಶ್ರೀ ಸೋಮಪ್ಪನವರ ಬದುಕಿನಲ್ಲಿ ಅದೊಂದು ಪರ್ವಕಾಲ—ಹಿಂದೆಂದೂ ಹಾಸ್ಗೆ ಮುಖ ಕಂಡವರಲ್ಲ—ಅವರ ಅರ್ಥದಲ್ಲಿ ಹಾಸ್ಗೆ ಅಂದ್ರೆ ಒಂದು ಹರಕಲು ಚಾಪೆ ಮಾತ್ರಾ

ಆದಿತ್ತು—ಆದರೀಗ ಸೊಗಸಾದ ಫ್ರೇಮ್ ಹಾಸಿಗೆ, ಚಿತ್ರ ವಿಚಿತ್ರ ಕುಸುರಿ ಕೆಲಸದ ಕಲಾತ್ಮಕ ಶ್ರೀಗಂಧದ ಜೋಡಿ ಮಂಚ—ಆಹಾ! ಸೊಗಸಾದ ಕಾಶ್ಮೀರಿ ರಗ್ಗು—ಭಲಾ! ಭಲಾ! ಮಾನ್ಯ ಸೋಮಪ್ಪನವರ ಪುಣ್ಯವೇ ಪುಣ್ಯ—

ಶ್ರೀ ಶ್ರೀ ಸೋಮಪ್ಪನವರಿಗೆ ಹಾಸಿಗೆಗೆ ಒರಗಿದ್ದೊಂದೇ ಗೊತ್ತು—ಕಣ್ಣು ಬಿಟ್ಟಾಗ ಮಾರುದಿನ ನಡು ಮಧ್ಯಾಹ್ನ ಏರಿ ಹೋದಿತ್ತು—

ಶ್ರೀ ಶ್ರೀ ಸೋಮಪ್ಪನವರು ಕಣ್ಣು ಬಿಟ್ಕೊಂಡೇ ಮಲಗಿದ್ದರು. ಮೇಲೆ ಏಳೋದಿಕ್ಕೆ ಆಗ್ದೇ ಇರುವಷ್ಟು ಜಡತೆ ಅವರನ್ನ ಆವರಿಸಿಬಿಟ್ಟಿತ್ತು. ಒಂದೊಂದಾಗಿ ನಡೆದದ್ದೆಲ್ಲಾ ನೆನಪಿಗೆ ಬರತೊಡಗಿತು—ಇದೇನು ಕನಸೋ? ತಮ್ಮ ತೊಡೆ ಚಿವುಟಿಕೊಂಡರು—ಹಾ! ಜೋರಾಗಿ ಚಿವುಟಿಕೊಂಡಿದ್ದರಿಂದ ಉಗುರು ಅವರ ಚರ್ಮವನ್ನು ಭೇದಿಸಿತ್ತು— ಹಾಗಾದ್ರೆ ಇದು ಕನಸಲ್ಲ—ಸೊಗಸಾದ ಹಾಸಿಗೆ, ಮಂಚ ಆಹಾ! ಮಯೂರ ಚಿತ್ರದಲ್ಲಿ ರಾಜ್‌ಕುಮಾರ್ ಮಲಗಿರ್ತಾನಲ್ಲ! ಅಂತಾ ಮಂಚ—ಬೆರಳು ನೇವರಿಸಿದರು, ಹೌದು! ಆ ಉಂಗ್ರ ಅಲ್ಲೇ ಇದೆ—ಹೊಟ್ಟೆ ಚುರುಗುಟ್ತಾ ಇದೆ—ಅಪ್ರಯತ್ನವಾಗಿ ಕೈ ಉಂಗುರದತ್ತ ಹೋಯ್ತು. ಯಥಾ ಪ್ರಕಾರ ಮಿಂಚಿನ ಬೆಳಕು—ಆ ತೆಂಗಿನ ಮರದಷ್ಟು ಎತ್ತರದ ಭೂತ ಕಾಲಿಗೆ ನಮಸ್ಕರಿಸುತ್ತಿದೆ.

"ಏನಪ್ಪಣೆ! ನಾನು ಉಂಗುರದ ಗುಲಾಮ!

"ನಂಗೆ ಹಸಿವಾಗ್ತೈತೆ— ಗೌಡ್ರ ಮದ್ವೇಲಿ ಮಾಡಿದ್ರಲ್ಲ ಅಂತಾ ದೆಲ್ಲಾ ತಗಂಬಾ"

"ಅಪ್ಪಣೆ"

ಮಾಯವಾದ ಭೂತ ಮರುಕ್ಷಣದಲ್ಲಿ ಪ್ರತ್ಯಕ್ಷವಾಯ್ತು. ಆಹಾ! ಅದರ ಕೈಯಲ್ಲಿರುವ ಕಟ್ಟಿಯಿಂದ ಅದೆಂಥಾ ಸೊಗಸಾದವಾಸನೆ... ಆತುರ ಜಾಸ್ತಿ ಆಯ್ತು...ತನ್ನ ಮುಂದೆ ಇದ್ದ ತಳಿಗೆಗೆ ಕೈ ಹಾಕಿದರು—

"ಸ್ವಲ್ಪ ತಡೆಯಿರಿ ಮಹಾಸ್ವಾಮಿ! ತಾವಿನ್ನೂ ಹಲ್ಲುಜ್ಜಿಲ್ಲ!"

"ಎಲಾ! ಎಲಾ! ಭೂತ! ನೀನೂ ಪರ್ವಾಗಿಲ್ಲ! ನಾನೂ ನಿನ್ನ ಏನೋ ಅಂದ್ಕಂಡಿದ್ದೆ" ಅಂತ ಮನಸ್ಸಿನಲ್ಲೇ ಅಂದುಕೊಂಡ ನಮ್ಮ ನಾಯಕರು ಅಪ್ಪಣೆ ಮಾಡಿದರು.

"ಹಾಗಿದ್ರೆ ಬೇವಿನ ಕಡ್ಡಿ ತಗಂಬಾ!"

"ಪ್ರಭುಗಳು ಕ್ಷಮಿಸಬೇಕು—ಬೇವಿನ ಕಡ್ಡಿ ಕಾಲ ಮುಗಿದೋಯ್ತು ಇದು ಆಧುನಿಕ ಕಾಲ—ಆದ್ರಿಂದ ಇದ್ನ ತಗೊಳ್ಳಿ".

ಭೂತ ಕೈ ಚಾಚಿದಾಗ, ಅದ್ರಲ್ಲಿ ಪ್ರಾಮಿಸ್ ಟೂತ್ ಪೇಸ್ಟು ಮತ್ತು ಬ್ರಷ್ ಇತ್ತು ಇದ್ರಿಂದ ಎಂಗಪ್ಪಾ ಉಜ್ಜೊಳೋದು? ಮಾನ್ಯ ಸೋಮಪ್ಪನವರಿಗೆ ಬೇವಿನ ಕಡ್ಡಿ ನೆನಪಾಯ್ತು— ಅದ್ರ ಹಾಗೇ ಇದನ್ನೂ ಚೆನ್ನಾಗಿ ಕಚ್ಚಿ ಕಚ್ಚಿ ತಿನ್ಬೇಕಾ?"

"ಅದ್ರ ಕ್ರಮ ಹೀಗೆ ಪ್ರಭು"

ಶ್ರೀ ಶ್ರೀ ಶ್ರೀ ಸೋಮಪ್ಪನವರ ಮನಸ್ಸನ್ನ ಓದಿದಂತೆ ಭೂತ ನುಡಿಯಿತು. ತಾನೇ ಟ್ಯೂಬ್‌ನಿಂದ ಪೇಸ್ಟನ್ನು ತೆಗೆದು, ಬ್ರಷ್‌ಗೆ ಹಾಕಿ ದೈಹಿಕ ಶುಚಿಯ ಪ್ರಾಥಮಿಕ ಪಾಠವನ್ನ ಮಾನ್ಯ ಸೋಮಪ್ಪನವರಿಗೆ ಬೋಧಿಸಲು ಸಿದ್ಧವಾಯ್ತು.

ಶ್ರೀ ಶ್ರೀ ಸೋಮಪ್ಪನವರು ತಮ್ಮ ಅಟ್ಟ ಸೇರಿದಾಗ ಆಗ್ಲೇ ಸಂಜೇ ಹೊತ್ತು. ಹೆಂಡ್ತಿ ವಟವಟ ಅರ್ಧ ಫರ್ಲಾಂಗ್ ದೂರದಿಂದ್ಲೇ ಕೇಳಿಸ್ತು. ಈ ದರಿದ್ರ ಯಾವಾಗ್ಲೂ ಹೀಗೆ—ಗೌಡ್ನ ಅತ್ರ ಮಾತ್ರ ಆದೇಸ್ ನಡಾ

ನಡ್ತಾ ಇರ್‍ತಾಳೆ—ಗೌಡ್ನ ನೆನಪಾಗಿದ್ದಂತೆಯೇ ನಮ್ಮ ನಾಯಕರ ಮೈ ಬಿಸಿಯಾಯ್ತು—ಆ ನನ್ಮಗ ಆಳುಗಳು ಮುಂದೆ ಆಗೋದು, ಅವ್ರ ಎಂಡ್ತಿ ಇವ್ನ ನೈ ತಿಕ್ಕಲಿ ಅಂತ ಅಂದ್ಕೊಂಡ್ ಬಿಟ್ಟಿದ್ದಾನೆ—ಅವ್ನ ಇಂತ ಮಾಡ್ತಿರ್‍ಲಿ—ಒಂದಿನಾ...

"ಏನಪ್ಲಾ ಮಾದೇವಿ! ನಿನ್ನಿಂದ ಈಟೊತ್ತಗಂಟಾ ಎಲ್ಲಿಗಪ್ಲಾ ಹಾಳಾದ್ ಹ್ವಾಗಿದ್ದೆ?"

ಎಂದ್ರಿ ಅರ್ಭಟಿ--ಮಾಮೂಲಿ ದಿನ ಆಗಿದ್ರೆ ಶ್ರೀ ಶ್ರೀ ಸೋಮಪ್ಪನವರು ನಾಯಿಮರಿ. ಆದ್ರೆ ಈಗ—

"ಏನೇ ಲೌಡಿ! ನಾಲ್ಗ ಬಾಳಾ ಉದ್ದ ಬಿಟ್ಟಿದ್ದೀ ಟಿ ನಾಲಿ! ಪಾಂಚಲಿ ಮಾಡಿದ್ರೆ ಚರ್ಮ ಸುಲದ್ ಬಿಡ್ತೇನೆ"

ಕೆಂಚಿಗೆ ಸೋಮ್ಯಾನ ಈ ಪರಿ ತೀರಾ ಹೊಸದು. ಯಾವತ್ತೂ ಇಂದೆ, ತನ್ ಮಾತ್ಗೆ ಎದುರು ಬೀಳ್ತಿರ್‍ಲಿಲ್ಲ! ಸೋಮ್ಯಾ ಅಮ್ಮಾವ್ರ ಗಂಡ ಅಂತ ಅಳ್ಳಿಗೇ ಗೊತ್ತಿದ್ ಸಂಗ್ತಿ—ಅಷ್ಟೇ ಏನು? ಐನಾತಿ ಹೆಂಗ್ಸರನ್ನ ಎಂಡ್ತಿರಾಗಿ ಪಡೆದ ಆ ಅಳ್ಳೀ ಗಂಡಸರೆಲ್ಲಾ ಅಮ್ಮಾವ್ರ ಗಂಡಂದ್ರೇ—ಗೌಡ್ರ ಏಸೆ ಹೊಕ್ಕಿರದ ಮನೆ ಅಲ್ಲ್ಯಾವ್ದು ಇರ್‍ಲಿಲ್ವಲ್ಲಾ—ಅದ್ರಿಂದ ಗೌಡಂಗೆ ಗೌಡ್ನಬಲ ಗಂಡಸ್ರು ಮುಂದೆ ಮಾತ್ರ—ಎಷ್ಟಂದ್ರೂ ಗೌಡ ಗಂಡ್ಸೆ ತಾನೆ—ಈ ವಿಚಾರದಲ್ಲಿ ಅವ್ರ ತಾಕತ್ ಏನಿದ್ರೂ ಗಂಡಸ್ರು ಮೇಲೆ ಮಾತ್ರಾ—

"ಏನಪ್ಲಾ ಮಾದೇವಿ! ಅಗ್ಲೇ ಆಕೊಂಡ್ ಬಂದಿದ್ದೀ"

ಮಾನ್ಯ ಸೋಮಪ್ಪನವರಿಗೆ ಎಲ್ಲಿಲ್ಲದ ಅವೇಶ ಬಂತು—ಅಲ್ಲೇ ಮೂಲೇಲಿ ಇಟ್ಟಿದ್ದ ತಿರಾವೋ ಕೋಲು ಇತ್ತು— ಕೈಗ್ ತಂಗದ್ರು—ಲಬೋ ಲಬೋ ಸ್ವರ ಮಂದಿಲು ಮುಟ್ಟಿ— ಕೆಂಚ, ಕಾಳ, ಕರಿಯ, ಚನಿಯ, ಅವ್ರ ಎಂಡ್ರು, ಮಕ್ಕು, ಸೇರಿ, ಹಾವು, ಚಟಾಕು ಶ್ರೀ ಶ್ರೀ ಸೋಮಪ್ಪನವರ ಅರಮನೆ ಮುಂದೆ.. ಇದ್ರ ಪಂಚಾಯ್ತಿ ಆ ಹತ್ತು ಸಮಾಸ್ತರ ಎದುರಿಗೆ— ಕರಿಯ ನಾಯಕರನ್ನ ಪಕ್ಕಕ್ಕೆ ಕರ್ಕಂಡ್ ಹೋದಿ ಪ್ರೀತಿಯಿಂದ ಹೇಳ್ದ.

"ಏನಪ್ಪ ಸೋಮಣ್ಣಾ, ನಿನ್ನೆಂಡ್ತಿಗ್ ಇಂಗ್ ಬಡಿದ್ರೆ, ಗೌಡ್ರು ಸುಮ್ನೆ ಬುಟಾರಾ! ನನ್ ನೋಡ್ಕೊ, ನಿಂಗ್ ಬುದ್ಧಿ ಬರ್ಲಿಲ್ವಾ!"

ಅವತ್ತೊಂದ್ ದಿನ ಗೌಡ್ರ ಕಾಲು ಕರಿಯನ ಮನೆಗೆ ದಯೆ ಮಾಡ್ಸಿತ್ತು—ಕರ್ಯ ಮಂದಿವ್ನಾಗಿ ಇನ್ನೂ ನಾರ ಆದಿರ್ಲಿಲ್ಲ— ಆಗ್ಲೇ ಬಂದ್ರಲ್ಲಾ ಅವ್ರು—ಗೌಡ್ರ ಮುಂದೆ ಏನೂ ಅನ್ನಾಕ್ ಧೈರ್ಯ ಬರ್ಲಿಲ್ಲಾ! ಎಂತಾ ಮಾಡೋದು? ಗೌಡ ಹಪ್ಪದ್ ಮ್ಯಾಗೆ ಬೆತ್ತ ತಗಂಡ್ ಎಂಟ್ರನ್ ಡಾರಿಸ್ದ—ಲಚ್ಚಿ ಲಬೋ ಲಬೋ ಅಂತ ಬಚ್ಕಂಡ್ಳು—ಏಷ್ಟ ಗೌಡ್ರ ಸಿವಿಗ್ ಬತ್ತು—ಕರ್ಯನ್ನ ಕಸ್ಸಿ ಚಾವಡಿ ಕಂಭಕ್ ಕಟ್ಟಾಕಿದ್ರು—ನಾಗರಬೆತ್ತ ತಗಂಡು, ತಮ್ ತೋಳಿನ್ ಶಕ್ತೀನ್ ಪ್ರದರ್ಶನ ಮಾಡಿದ್ರು—ಎರಡ್ದಿನ ಅಂಗೇ ಬಿಟ್ಟಿದ್ರು—ಕರ್ಯ ತೇಲುಗಣ್ಣು, ಮೇಲುಗಣ್ಣು ಮಾಡ್ಕೊಂಡು ಎಂಗೋ ಬಿದ್ದಿದ್ದ—ಮೈಯ್ಯ ಸಕ್ತಿ ಎಲ್ಲಾ ಓಂಟೋದಿದ್ವೇ! ಆಮ್ಯಾಕೇ ಗೌಡ್ರು ಅವ್ನ ಬಿಟ್ಟಿದ್ದು—

ಕರ್ಯಂಗಾದ್ ಗತಿ ಕಂಡು ಉಳಿದೋವ್ರ ತೊಳ್ಳೆ ನಡ್ಗಕ್ ಸುರು ಆತು—ಅವ್ರ ಹೆಂಡ್ರ ಸಂಗ್ತಿ ಎಂತ? ಕೆಲವರಿಗೆ ಗೌಡನ್ ಕಂಡ್ರೆ ಒಳಗೊಳಗೇ ಆಸೆ—ಒಳ್ಳೇ ಕೆಂಪ್ಗೆ ಎಷ್ಟು ಚೆನ್ನಾಗವ್ರೆ—ಪಿಚ್ಚರ್ ಈರೋ ತರ—ಕೇಳ್ದಿಗ್ಲಲ್ಲಾ ಒಂದೂ, ಎರಡೋ ಕೊಡ್ತಾರೆ. ಎಚ್ಚಿನ್ ಹೆಂಗುಸ್ರಿಗೆ ಭಯ—ಕರಿಯನಂತಾ ಗಂಡ್ಸೇ ತಿಕಾಬಾಯಿ ಮುಚ್ಕಂಡ್ ಇರುವಾಗ ತಮ್ಮದೇನಾ? ಎಂಗಿದ್ರೂ ಗೌಡ್ರು ಇರೋಗಂಟ ತಮ್ ತಮ್ ಗಂಡಸ್ರು ತಮ್ ಸುದ್ದೀಗ್ ಬರಾಕಿಲ್ಲ—ಅಂದ್ಮೇಲೆ ಭಯ ಯಾಕೆ? ಎಂಗೂ ಕೇರಿಲ್ ಇರೋವ್ರೆಲ್ಲಾ ತಮ್ಮಂತೋರೇ ಅಲ್ವಾ! ಇಷ್ಟ ಇದ್ದೂ, ಇಲ್ದೇನೋ, ಅಂತೂ ಎಲ್ರೂ ಗೌಡ್ರ ಸೇವೆ ಮಾಡ್ತೋರೇ ಎಲ್ಲಾ!

ಮಾನ್ಯ ಸೋಮಪ್ಪನವರಿಗೆ ಆ ಕ್ಷಣ ಏನು ಮಾಡ್ಬೇಕು ಅಂತ್ಲೇ ಗೊತ್ತಾಗ್ಲಿಲ್ಲ. ಒಂದ್ಕಡೆ ಗೌಡ್ನ ಭಯ— ಎಲ್ಲಾದ್ರೂ ದೂರ ಹ್ವಾಗ್ಬೇಕು ಒಂದ್ ನಾಕ್‌ದಿನ ಇದ್ದು ಗೌಡ್ನ ಸಿಟ್ಟು ಕಡಿಮೆ ಆದ್ಮೇಲೆ ಬರ್ಬೇಕು— ತಲೆ ತಗ್ಗಿಸಿಕೊಂಡು ನಮ್ಮ ಕಾಯಕರು ಅಲ್ಲಿಂದ ಹೊರಟರು.

ಆಹಾ! ಇನ್ ಪರ್ವಾಗಿಲ್ಲ. ಆ ನನ್ಮಗ ಗೌಡಂಗೆ ನಾನ್ ಎದ್ರುಬೇಕಾದಿಲ್ಲ— ನನ್ ಎಣ್ತಿ ಜೊತೆ ಆತ ಮಲಗ್ತಾ ಇಲ್ವಾ? ಅವ್ನು ನನ್ ಎಣ್ತಿ ಜೊತೆ ಮಲಗ್ದಂಗೆ ನಾನೂ ಯಾಕೆ ಆವ್ನ ಎಣ್ತಿ ತಾವ— ಒಂದು ಕ್ಷಣ ಬೆನ್ನ ಮೂಳೇಲಿ ಛಳಕು ಹೊಡ್ದ ಹಾಗೆ ಆಯ್ತು— ಛೇ! ಛೇ! ಗೌಡ್ತಿ ಮ್ಯಾಗ್ ಕಣ್ ಆಕಾದ! ತಪ್ಪು, ತಪ್ಪು! ಸ್ವಲ್ಪ ಹೊತ್ತು ಸುಮ್ಕೆ ಮಲ್ಕಂಡ್ರು ಮಂಗ್ಳಲಾದ್ರು— ಉಹ್ಞು! ನಿದ್ದೆ ಬರಂದಿಲ್ಲ— ತನ್ ಎಣ್ತಿ ಗೌಡ್ನ ಮೈ ಬಿಸಿ ಮಾಡಿದ್ಮೇಲೆ, ಗೌಡ್ನ ಎಣ್ತಿ ತನ್ ಮೈ ಬಿಸಿ ಮಾಡಿದ್ರೆ ತಪ್ಪೇನು? ಛೇ! ನನ್ನೇನ ಮಾಡ್ಬೇಕಿತ್ತು. ಸರಿ! ಏಳಿದ್ ಕೆಲ್ಸ ಮಾಡೋಕೆ ಎಂಗೂ ಭೂತ ಐತೆ— ಶ್ರೀ ಶ್ರೀ ಶ್ರೀ ಸೋಮಪ್ಪನವರ ಕೈ ಅಪ್ರಯತ್ನವಾಗಿ ಉಂಗ್ರ ಸವರಿತು— ಯಥಾಪ್ರಕಾರ ಭೂತ ಬಂತು

"ಏನಪ್ಪಣೆ! ನಾನು ಉಂಗುರದ ಗುಲಾಮ!"

"ಈಗಿಂದೀಗ್ಲೇ ಹೋಗಿ ಗೌಡ್ನ ಎಣ್ತಿನ್ ಎತ್ಕಂಡ್ ಈ ಆಸ್ಗೆ ಮೇಲ್ ಮಲಗ್ಸು— ಬೆಳಿಗ್ಗೆ ಹೊತ್ತಾರೇಗೇ ಕರ್ಕಂಡ್ ಹ್ವಾಗ್ ವಾಪ್ಸು ಬಿಟ್ ಬಾ!"

"ಅಪ್ಪಣೆ!"

ಭೂತ ಮಾಯವಾಗಿ, ಉತ್ತರ ಕ್ಷಣದಲ್ಲಿಯೇ ಪ್ರತ್ಯಕ್ಷವಾಯ್ತು ಮಾನ್ಯ ಸೋಮಪ್ಪನವರ ಮಂಗ್ಳಲ್ಲಿ ಗೌಡ್ರ ಹೆಣ್ತಿನ್ ಮಲಗ್ಸಿ ಮಾಯೂ ಆಯ್ತು...ಪಾಪ! ಗೌಡ್ತಿಗ್ ಅದೆಂಥಾ ಕನಸೋ? ಮಂಗ್ಗಲು ಬದ್ಲಾಯ್ಸಿ ಇವರ ಕಡೇನೇ ತಿರುಗಿ ಮಲಗಿದ್ಳು...ಮಧ್ಯರಾತ್ರಿ ಆಗೋಗ...ನಕ್ಷತ್ರ ಮಿಣ ಮಿಣ ಅಂತಿದೆ...ಎದ್ದೇಲಿ ಗೌಡ್ತಿ ಇವ್ರ ಮೈಮ್ಯಾಲೆ ಕೈ ಆಕುದ್ಲು... ಮತ್ತೆ ತಡ್ಮಾಕ್ ಆಗ್ಲಿಲ್ಲ...ನಮ್ ನಾಯಕರಿಗೆ...ಅಂತೂ ಬಹುದಿನದ ಕನಸು...ತಳಿಗೆ ತುಂಬಾ ಅಣ್ಣು...ಮಾನ್ಯ ಸೋಮಪ್ಪನವರು ಆಗ್ಲೇ ಸೊಗಸಾಗಿ ಕಂಡಿದಿದ್ದರು...ಈಗ ಅಷ್ಟೇ ಸೊಗಸಾಗಿ ಉಂಡರು....

ಮುಂಜಾನೆ ಎದ್ದಾಗ ಗೌಡ್ತಿಗೆ ವಿಚಿತ್ರವಾದ ಆನಂದ ಆಗ್ತಾ ಇತ್ತು. ನಿನ್ನೆ ಅದೇನ್ ಕನಸು? ನಾನು ನಿದ್ದೆ ಮಾಡ್ತಿದ್ದೆ...ಅದೇನೋ ಗಾಳಿ ಬಂದಂಗಾತು...ಮಂಚದ್ ಸಮೇತ ತಾನು ಆಕಾಶಕ್ ಹಾರಿದೆ...ಹಾರ್ತಾ ಹಾರ್ತಾ ಒಯ್ತಿರ್‌ಬೇಕಾದ್ರೆ ಒಂದು ದೊಡ್ಡ ಉದ್ಯಾನವನ, ಕೆಳಗ್ ಕಾಣಿಸ್ತು. ಅಲ್ಲೊಬ್ಬ ರಾಜಕುಮಾರ...ಸರಿಯಾಗ್ ನೋಡಿದ್ರೆ, ತನ್ ಗೌಡನೆ...ಎಷ್ಟೊಂದ್ ದಿನ ಆಗಿತ್ತು. ಗೌಡ ತನ್ನತ್ರ ಬಂದು ಪ್ರೀತಿಯಿಂದ ತಬ್ಕಂಡ...ಹಿಂದೆಂದೂ ಆ ರೀತಿ ಅಷ್ಟು ಬಿಗಿಯಾಗಿ, ಅಷ್ಟು ಕಾತುರದಿಂದ ತನ್ನನ್ನ ಗೌಡ ತಬ್ಬಿರಲಿಲ್ಲ. ನಾನೂ ಮೈ ಮರೆತೆ...ಮುಂದಿದ ಅದೆಂಗೇ ಆದೂ? ಛೇ, ನಾಚ್ಕೆ ಆಗ್ತೈತೆ...ಗೌಡ್ತಿ ತನ್ ಎದೆ ಮುಟ್ಟಿ ನೋಡಿಕೊಂಡ್ಳು...ಕೋಳಿನ್ ಮ್ಯಾಕೆ, ಎದೆ ಮ್ಯಾಕೆಲ್ಲಾ ಹಸಿರಾಗಿದ್ದಂತೆ ಅನ್ನಿಸ್ತು. ಗಾಬರಿಯಾಗಿ ಸ್ನಾನದ ಮನೀಗ್ ಹ್ವಾಗಿ ಎಲ್ಲದನ್ನೂ ನೋಡ್ಕಂಡ್ಳು... ಅವ್ವ! ಅಲ್ಲಲ್ಲಾ ಉಗುರಿನ ಗುರ್ತಾಗಿದೆ..ಹಸಿರು ಕಲೆ..ಅಂದ್ರೆ, ರಾತ್ರಿ ನಡೆದದ್ದು ಕನಸಲ್ಲ..ಅಂಗಾದ್ರೆ, ರಾತ್ರಿ ನನ್ ಪಕ್ಕ ಮಲಗಿದವ್ರು ಯಾರು? ತಾನ್ ನಿದ್ರೆ ಮಾಡ್ತಿದ್ದಾಗ ಗೌಡ್ರೇ ರಾತ್ರಿ ಬಂದಿರ್ಬೇಕು, ಅಂತ ಸಮಾಧಾನ ಆತು..ಆದ್ರೆ, ರಾತ್ರಿ ಮಲಗಿದ್ದಾಗ, ಇದ್ದಂತೆ ಬೆಳಿಗ್ಗೆ ಎದ್ದಾಗ್ಲೂ ಸೀರೆ ಮೈಮೇಲೆ ಇತ್ತಲ್ಲಾ, ಹಾಗಿದ್ರೆ ಇದು ಕನಸಾ? ನನಸಾ?

ಬೆಳಗ್‌ನಿಂದ ಸಂಜೇಗಂಟ ಯೋಚ್ನೆ ಮಾಡಿದ್ರೂ ಗೌಡ್ತಿ ಸಮಸ್ಯೆ ಬಗೆಹರೀವಲ್ದು.

ರಾತ್ರಿ ಗೌಡ್ತಿ ಜತೆ ಮನಿಕ್ಕಂಡ್ ಬೆಳಿಗ್ಗೆ ಏಳ್ತಿದಂಗೇ ಶ್ರೀ ಶ್ರೀ ಸೋಮಪ್ಪನವರಲ್ಲಿ ಅಭೂತಪೂರ್ವ ಬದಲಾವಣೆ ಆಗ್ಬಿಟ್ಟಿತ್ತು.. ಇನ್ ಉಂಗ್ರದ ಸಾಯ ಇರೋಗಂಟ, ತಾವು ಯಾರಿಗೂ ಕ್ಯಾರೇ ಅನ್ಬೇಕಾಗಿಲ್ಲ... ಶ್ರೀಯುತ ಸೋಮಪ್ಪನವರು ಎದೆ ಉಬ್ಬಿಸಿ ನಡೆದರು...ಸೀದಾ ಅಳ್ಳೀ ಕಡೆಗೆ...ಈಗ ಅವ್ರಿಗೆ ಯಾರ್ ಮುಲಾಜು...? ಗೌಡ್ನ ಒಲಾಸಿಕ್ತು..

ದೂರದಲ್ಲಿ ಕರಿಯ, ಕೆಂಚ, ಚನ್ನಿಯು ಎಲ್ಲಾ ಆಗ್ಲೆ ಕೆಲ್ಸ ಶುರು ಮಾಡಿದ್ ಕಣ್ಣಿಗೆ ಬಿತ್ರು... ನಮ್ ನಾಯಕರಿಗೆ ಅಲ್ಲಿಗ್ ಹೋಗ್ಬೇಕು ಅನ್ನಿಸ್ಲಿಲ್ಲ... ನೇರ ಕೇರಿ ಕಡೆ ನಡೆದ್ರು...

ಶ್ರೀ-ಶ್ರೀ ಸೋಮಪ್ಪನವರು ಕೇರಿ ವಳೀಕ್ಕೆ ಕಾಲಿಡುತ್ತಿದ್ದಂತೆಯೇ ಕಿರಿಚೋನ ಕಜ್ಜನಾಯಿ ಬೊಗಳಿ ಪ್ರೀತಿಯ ಸ್ವಾಗತ ನೀಡಿತು... ಹಿಂದೆಲ್ಲಾ ಇಲ್ಲದಂಗೆ ಮಾನ್ಯ ಸೋಮಪ್ಪನವರು, ತಮ್ಮ ಮೈಗೆ ಕೊಚ್ಚೆ ಅಂಟದಂತೆ, ಎಚ್ಚರಿಕೆಯಿಂದ ಹೆಜ್ಜೆ ಕಿತ್ತಿಡುತ್ತಾ ನಡೆದರು... ಇಷ್ಟು ದಿನ ಅವ್ರ ಅನುಭವಕ್ಕೆ ಬರದ ಸೊಳ್ಳೆ ಕಡಿತ, ಹೇಲು, ಉಚ್ಚೆ ವಾಸನೆ, ಹಂದಿ, ಕೋಳಿಗಳ ಹಿಚ್ಕೆ ಇವೆಲ್ಲಾ ಅವ್ರ ಕಣ್ಣು ಮೂಗುಗಳಿಗೆ ರಪ್ಪನೆ ಬಡಿಯಿತು... ಛೀ, ಛೀ, ಅಂತ ಮೂತಿ ಸಿಂಡರಿಸಿಕೊಂಡೇ ಮುನ್ನಡೆದರು ಕೇರಿಯಲ್ಲೀಗ ಚಟಾಕುಗಳದ್ದೇ ಸಾಮ್ರಾಜ್ಯ. ಕಣ್ಣು ಕಾಣದ ಮುದುಕಿಯರು, ಕೈಲಾಗದ ಮುದುಕರು ಇವರನ್ನ ಹೊರತು ಪಡಿಸಿ, ಉಳಿದವರೆಲ್ಲಾ ಜೀತಕ್ಕೆ ಹೋಗಿದ್ರು.. ಇದ್ದಕ್ಕಿದ್ದಂತೆ ನಮ್ಮ ನಾಯಕರ ತಲೆಗೆ ಒಂದು ತುಂಟ ಆಲೋಚನೆ ಬಂದಿತು.. ಸರಸರಾಂತ ಆಟ್ಟಿ ಅತ್ರ ಬಂದ್ರು... ಅಲ್ಲಿ ಅವರ ಏಳು ವರ್ಷದ ಮಗಳು ಪುಟ್ಟಿ ತನ್ನ ಪುಟ್ಟ ತಮ್ಮನ್ನ ಆಡಿಸ್ತಾ ಇದ್ಲು... ಮಾನ್ಯ ಸೋಮಪ್ಪನವರು ಪ್ರೀತಿಯಿಂದ ಮಗಳ ತಲೆ ನೇವರಿಸಿದರು... ಇವ್ರಂತೂ ಖಂಡಿತಾ ನನ್ ಬೀಜಕ್ಕೆ ಹುಟ್ಟಿದವ್ರೆ...ಅವ್ರ ಮುಖ ಥೇಟ್ ತನ್ನದೆ...ಜೇಬಲ್ಲೆಲ್ಲಾ ತಡಕಾಡಿದಾಗ ಸಿಕ್ಕ ಅತ್ರುಪೈಸೆನಾ ಉದಾರವಾಗಿ ಪುಟ್ಟಿಯ ಪುಟ್ಟಿ ಕೈಗೆ ಕೊಟ್ಟರು... ಪುಟ್ಟಿಗಂತೂ ಆ ದಿನ ಮಹಾ ಸುದಿನ, ಯಾವತ್ತೂ ಪೈಸೆಕೊಡದ ಅಪ್ಪ ಇವತ್ತು ತನಗೆ ಅತ್ರು ಪೈಸೆ ಕೊಟ್ಟವ್ನೆ... ಈ ಅತ್ರು ಪೈಸೆಗೆ ಏನು ತಗೋಳ್ಳೋದು.... ಸಕ್ರೆ ಡ್ಡಿ, ಮಿಠಾಯಿ ಅಂತ ಜಪ ಮಾಡುತ್ತಾ ತಮ್ಮನನ್ನ ಸೊಂಟದಲ್ಲಿ ಎತ್ತಿಕೊಂಡು ಓಡಿದಳು... ಈಗ ನಮ್ಮ ನಾಯಕರಿಗೆ ಒಂದು ಸುವರ್ಣಾವಕಾಶ, ಉಂಗ್ರದ ಮೇಲೆ, ಕೆಳಗೆ ಉಜ್ಜಿದರು. ತಕ್ಷಣ ಮಿಂಚಿನ ಬೆಳಕು.... ಗುಡು ಗುಡು ಗುಡು - ಗುತ್ತು ಮಂಕಣ್ಣ ಭೂತ ಪ್ರತ್ಯಕ್ಷ.

"ಏನಪ್ಪಾ! ನಾನು ಊಗುರಪ ಗುಲಾಮು"

"ಈ ಕೊಟ್ಟ ವಾಸ್ನೇಲಿ ನಾನು ಸಾಯ್ತೀನೆ, ತಲೆ ಎತ್ತಿದ್ರೆ ಗೂಟಕ್ಕೆ ತಗಲ್ತಾತೆ...ಕೇರಿ ತುಂಬಾ ದುರ್ನಾತ. ಕೇರಿಗ್ ಕೇರೀನೆ ಇನ್ನೊಂದು ನಮೂನೆಡಲ್ಲಿ ಬದ್ಲಾಗ್ ಬೇಕು....ಇಲ್ಲಿಗೂ ಎಲ್ಲಾ ಗುಡಿಸ್ಲು ಹ್ಯಾಗಿ, ಅದ್ರ ಜಾಗ್ದಲ್ಲಿ ಗೌಡ್ರ ಅಟ್ಟ ಉಂಟಲ್ಲಾ, ಅಂತಾ......"

"ಒಂದ್ನಿಮಿಷ ಪ್ರಭು..." ನಮ್ಮ ನಾಯಕರ ಮಾತನ್ನ ಅಲ್ಲಿಗೇ ಕತ್ತರಿಸುತ್ತಾ ಭೂತ ನುಡಿಯಿತು. "ನಿಮ್ ಗೌಡ್ರ ಮನೆ ನಾಲಾಯಕ್ ಮಣ್ಣಿನ್ ಮನೆ...ಜೋರಾಗಿ ಗಾಳಿ ಬೀಸಿದ್ರೆ ಹೆಂಚುಗಳು ಹಾರೋಗ್ತವೆ. ಅದ್ರ ಬದ್ಲು ಸೊಗಸಾದ ಸಿಮೆಂಟ್ ಮನೆ ಕಟ್ಟಿದ್ರೆ ಹ್ಯಾಗೆ?"

ಮಾನ್ಯ ಸೋಮಪ್ಪನವರಿಗೆ ಏನು ಹೇಳ್ಬೇಕೂ ಗೊತ್ತಾಗ್ಲಿಲ್ಲ— ಒಂದಂತೂ ನಿಜ..ಈ ಭೂತಕ್ಕೆ ಶ್ಯಾನೇ ಬುದ್ಧಿ ಐತೆ—ನಿನ್ನೆ ಶಾಸ್ತ್ರಿ ಗಂಗಣ್ಣನ್ ತೀರ್ಥದ್ ಬದ್ಲಿಗ್ ಅದೆಂತದೋ ತಂದ್ಕೊಡ್ತಲ್ಲ. ಆಗ್ಲೇ ಅಧ್ಕೊಂಡೆ..ಇದು ಬಾಳಾ ಜೋರಿಂದು ಅಂತ..

"ಅದ್ಯಾವುದ್ದಾದ್ರು ಸರಿ! ಅಂತೂ ಒಂದ್ ಮನೆ..ಅವ್ರು ಯಾರಿದ್ಬೇಕು ಗೊತ್ತಾ..? ಆನೆ ಗುದ್ದಿದ್ರೂ ಏನೂ ಬಾರ್ದು..ಅಂಗಿರ್ಬೇಕು..ಹಾಸ್ಗೆ ಗೀಸ್ಗೆ ಎಂತದ್ದು ಇರ್ಬಾರ್ದು, ಗೊತ್ತಾಯ್ತ?"

"ಅಪ್ಪಣೆ"

ಭೂತ ಮಾಯ ಆಯ್ತು....ಮರುಕ್ಷಣ ಮನೆವಳಗಿದ್ದ ನಾಯಕರೂ ಕೇಂಪರಕ್ತ, ಆ ಕೇರಿ ಒಳಗಿದ್ದ ಎಲ್ರೂ, ಚಿಳ್ಳೆಪಿಳ್ಳೆ, ಚಟಾಕಿಗಳೂ, ಮುಂದೇಕ, ಮುದುಕಿಯರೂ ನೋಡು ನೋಡುತ್ತಿದ್ದಂತೆ ಆಕಾಶದಲ್ಲಿ ತೇಲಾಡಕ್ಕೆ ಶುರು ಮಾಡಿದ್ರು. ಎಲ್ರಿಗೂ ಗಾಬ್ರಿ...ಇದೇನು ಅಂತ ಕೆಲವ್ರು ದಾಬ್ರಿಗೆ ಕೂಗಿದ್ದೂ ಆಯ್ತು...ಕೆಲವರಂತೂ ಬಾಯಿ, ಬಾಯಿ ಮಾಡ್ಕೊಂಡ್ರು.... ಇದೆಲ್ಲಾ ಎರಡೇ ನಿಮಿಷ...ಆಕಾಶದಲ್ಲಿ ತೇಲ್ತಿದ್ದ ಅವ್ರೆಲ್ಲಾ ನಿಧಾನವಾಗಿ ಕೆಳ್ಗೆ ಇಳಿದ್ರು...ನೋಡ್ತಾರೆ! ಇದೇನಿದು? ಕೇರಿ ಗುಡಿಸಲುಗಳು "ಇರ್ಸೇರಾದ್" ಕಡೆ ಅರಮನೆಗಳಿವೆ! ಅಗಲವಾದ್ ಮಾರ್ಗ

ದಿಗ್ಭ್ರಮೆ ಆಗಿ, ಅವ್ರೆಲ್ಲಾ ನೋಡ್ತಿದ್ದಂತೆ ಯಾರೋ ತಳ್ಳಿದಂತೆ ಅವರೆಲ್ಲಾ ಒಂದೊಂದ್ ಮನೇಗ್ ಹ್ಹೋದ್ರು...ಆಹಾ! ಎಂತಾ ಮನೆ? ವಳೀಕ್ ಹ್ಹೋಗ್ತಿದ್ದಂತೆ ಒಂದ್ ದೊಡ್ಡ್ ವರಾಂಡ...ಅಲ್ಲಿ ಕೂತ್ಕೊಳದಿಕ್ಕೆ ಒಂದು ಸೋಫಾ...ಮೂಲೇಲಿ ಚಪ್ಪಲಿ ಗೂಡು...ಅದರೊಳಗೆ ವಿವಿಧ ಸೈಜಿನ ಚಪ್ಪಲಿ, ಬೂಟುಗಳು...ವರಾಂಡ ಹಾದು ಒಳಹೋದರೆ ವಿಶಾಲವಾದ ಹಾಲ್...ಮೂಲೆಯಲ್ಲಿ ಒಂದು ಕಲರ್ ವೀಡಿಯೋ ಟೀವಿ. ಏಳೆಂಟು ಮೆತ್ತನೆಯ ಆಸನಗಳು...ಪಕ್ಕ ತಿರುಗಿ ನೋಡಿದರೆ ನಾಲ್ಕು ದೊಡ್ಡ ದೊಡ್ಡ ಕೋಣೆಗಳು..ಒಂದೊಂದ್ ಕೋಣೆಯಲ್ಲೂ ಎರಡೆರಡು ದೊಡ್ಡ ಕಪಾಟುಗಳು...ಅಲ್ಲೆಲ್ಲಾ ಬರೀ ಬಟ್ಟೆಗಳು, ಅವೂ ಹೊಸಾ ಹೊಸಾ ಬಟ್ಟೆಗಳು ತುಂಬಿವೆ...ಎದುರಿಗೆ ಒಂದು ಡಬಲ್ ಕಾಟ್...ಅದರ ಮೇಲೆ ಎತ್ತರವಾದ ಫೋವರ್ ಹಾಸಿಗೆ...ಒಂದು ಅಲಂಕರಣ ಕನ್ನಡಿ...ಪ್ರತಿಯೊಂದು ಕೋಣೆಗಳ ಒಳಗೊಂದು ಅಟ್ಯಾಚ್ಡ್ ಬಾತ್‌ರೂಮ್...ಷವರ್ ಇದೆ..ಎರಡು ನಲ್ಲಿಗಳು ಅಲ್ಲಿವೆ...ಒಂದ್ರಲ್ಲಿ ಬಿಸಿನೀರು ಬರುತ್ತದೆ... ಇನ್ನೊಂದ್ರಲ್ಲಿ ತಣ್ಣೀರು...ಅದರ ಮೂಲೆಯಲ್ಲಿ ಇರೋದೇ ಪಾಯಿಖಾನೆ, ಅಂತಾ ಪಾಯಿಖಾನೇನೆ ಆ ಊರ ಜನ ಹಿಂದೆಂದೂ ಕಂಡು ಇರಲಿಲ್ಲ... ಕೇಳಿಯೂ ಇರಲಿಲ್ಲ...ಅಲ್ಲ ಗುಂಡಿ ಇಲ್ಲ...ಬದಲಿಗೆ ಕೋಣೆ ಮಧ್ಯದಲ್ಲಿ ಒಳ್ಳೇ ಕುರ್ಚಿ ಒಂದನ್ನ ಇಟ್ಟಿದ್ದಾರೆ...ಅದ್ರ ಮೇಲೆ ಆರಾಮವಾಗಿ ಕೂತ್ಕ ಬೌದು...ಗುಂಡಗಿದೆ..ಆದ್ರೆ ಮಧ್ಯೆ ಹಳ್ಳ...ಸ್ವತಃ ನಮ್ಮ ನಾಯಕರಿಗೆ ಕೂಡಾ ಅದ್ರಲ್ಲಿ ಹೇಗೆ ಪಾಯಿಖಾನೆಗೆ ಹೋಗೋದು? ಅಂತ ಸಮಸ್ಯೇನೆ, ಯೋಚ್ನೆ ಯಾಕೆ? ನಮ್ ಭೂತ ಇಲ್ವೇ, ಈಗ ಭೂತ ಆ ಕಮೋಡ್ ಮೇಲೆ ಕೂತ್ಕಂಡ್ ಕಕ್ಕಸ್‌ಗೆ ಹೋಗುವ ವಿಧಾನವನ್ನ DEMONSTRATE ಮಾಡಿ ತೋರಿಸಿತು.. ಈ ಕೋಣೆಗಳ ಆಚೆ ಒಂದು ಪುಟ್ಟ ಕೋಣೆ, ಅಲ್ಲಿ ಬರೀ ಆಟದ ಸಾಮಾನುಗಳು ...ಆ ಕೇರಿ ಮಕ್ಕಳಿರಲಿ, ಮುದುಕರೂ ಕಂಡೂ ಅರಿಯದ, ಕೇಳಿಯೂ ತಿಳಿಯದ ತರಾತರ ಆಟಿಕೆಗಳು.. ಕೀಲು ಕೊಟ್ಟ ಕೂಡಲೆ ಹೋಗುವ ಬಸ್ಸು, ಕಾರು, ಸ್ಕೂಟರು, ರೈಲು, ಹಾರಾಡುವ, ಓಲಾಡುವ, ಹುಲಿ, ಸಿಂಹ, ಆನೆಗಳು.. ಕೀಲು ಕೊಟ್ಟರೆ ಕುಣಿಯುವ ನವಿಲು, ಮಂಗ, ಒಂದೇ ಎರಡೇ...ಜೊತೆಗೇ ಅತ್ಯಾಧುನಿಕ

ವಾದ Sound Controler ಆಟಿಕೆಗಳು. ಒಂದು ಚಪ್ಪಾಳೆ ಹೊಡೆದರೆ ಸಾಕು, ಕಾರು ಬಿಡೋದಿಕೆ ಶುರು. ಇನ್ನೇನು ಗೋಡೆಗೆ ಡಿಕಿ ಹೊಡೆಯುತ್ತು, ಎನ್ನುವಷ್ಟರಲ್ಲಿ ಮತ್ತೊಂದು ಚಪ್ಪಾಳೆ. ಕಾರು ಅಲ್ಲಿಗೆ ನಿಲ್ಲುತ್ತದೆ. ಇದೆಂತಾ ವಿಚಿತ್ರ? ಆಟದ ಕೋಣೆಗೆ ಆಚೆ ಇರೋದೆ ಅಡಿಗೆ ಮನೆ.... ದೊಡ್ಡ ದೊಡ್ಡ ಕಪಾಟುಗಳು ಅಲ್ಲಿಯೂ ಇವೆ... ಅವುಗಳ ತುಂಬಾ ಕೇವಲ ಗೌಡ್ರು ಮನೇಲಿ ಅಪ್ರೂಪಕ್ಕೆ ಕಣ್ಣಿಗೆ ಬೀಳುವ ಸ್ಟೀಲ್ ಪಾತ್ರೆಗಳು.. ಒಂದು ಫ್ರಿಜ್... ಆ ಕಡೆ ಗ್ಯಾಸ್ ಒಲೆಗಳು, ಜೊತೆಗೆ ಇಲೆಕ್ಟ್ರಿಕಲ್ ಸ್ಟೌಗಳೂ ಇವೆ, ಅಡಿಗೆ ಮನೆ ಪಕ್ಕದಲ್ಲೇ ಇರುವುದು ಉಗ್ರಾಣ....ಅಲ್ಲಿ ಹೋಗಿ ನೋಡಿದ್ರೆ ಅಕ್ಕಿ, ಬೇಳೆ, ಬೆಲ್ಲ, ಸಕ್ಕರೆ, ಏನುಂಟು? ಏನಿಲ್ಲ? ಅಡಿಗೆ ಮನೆಯ ಅಗತ್ಯದ ಸಕಲ ಪರಿಕರಗಳೂ ಅಲ್ಲಿ ಓರಣವಾಗಿ ಜೋಡಿಸಲ್ಪಟ್ಟಿವೆ... ಇದರ ಎದುರಿಗೆ ಒಂದು ಪುಟ್ಟ ಕೋಣೆ. .ಅಲ್ಲಿ ಒಂದು ಮಂದಾಸನವೂ ಇದೆ. . ಆದ್ರೆ ಯಾವ್ದೇ ದೇವರ ಫೋಟೋ ಇಲ್ಲ. .ಹಿಂದೆ ಮತ್ತೊಂದು ದೊಡ್ಡ ಸ್ನಾನದ ಮನೆ. . ಅದೇ ಬಿಸಿನೀರಿನ, ತಣ್ಣೀರಿನ ವ್ಯವಸ್ಥೆ ಇರೊ ನಲ್ಲಿಗಳು, ಷವರ್‌ಗಳು. . ಹಿಂದೆ ಮತ್ತೊಂದು ಕಮೋಡ್ ಅದರ ಹಿಂದೆ ಇರೋದೆ ಹಿತ್ತಿಲು....ಅಲ್ಲಿ ಒಗಿಯೋಕೆ ಒಗಿಯೋ ಕಲ್ಲು, ನೀರಿನ ತೊಟ್ಟಿ, ಎಲ್ಲಾ ಇದೆ...ಸೋಪು, ಸೋಪ್ ಪೌಡರ್, ಕೂಡಾ ಅಲ್ಲಿದೆ ಪಕ್ಕದಲ್ಲೇ ಒಂದು ಸಣ್ಣ ಶೆಡ್....ಅದರೊಳಗೆ ಒಂದು ವೀಡಿಯೊ ಕೋನ್ ವಾಷಿಂಗ್ ಮೆಷಿನ್ ಡ್ರೈಯರ್ ಸಮೇತ ಇದೆ. ಅದರ ಪಕ್ಕದಲ್ಲಿರೋದೇ ಕಾರ್ ಶೆಡ್.. ಅಚ್ಚ ಬಿಳಿ ಬಣ್ಣದ ಬೆಂಜ್ ಕಾರ್ ಸಿದ್ಧವಾಗಿದೆ.. ಸುತ್ತಾ ಆಳೆತ್ತರದ ಕಾಂಪೌಂಡ್

....ನಂಗೆ ಗೊತ್ತು, ಪ್ರಿಯ ಓದುಗ, ಈಗ್ ನಿನ್‌ಮನಸ್ಸಲ್ಲಿ ಏನೇನೋ ಕಲ್ಪನೆ ಮಾಡ್ಕೊತಿದ್ದೀ ಅಂತ. . ನಂಗಾದ್ರೂ ಅಂತಾ ಒಂದ್ ಮನೆ, ಕಡೇ ಪಕ್ಷ ಬಾಡಿಗೆಗಾದ್ರೂ ಸಿಕ್ಕಿದ್ರೇ ಅಂತಾ...ಎಂದಾದರೂ ಒಂದು ದಿನ ಶ್ರೀ ಶ್ರೀ ಸೋಮಪ್ಪನವರ ಕೃಪಾಕಟಾಕ್ಷ ನಿನ್ ಮೇಲೆ ಬಿದ್ರೆ, ಬಾಡ್ಗೆ ಡ್ಯಾಕ್, ಸ್ವಂತಕ್ಕೇ ಅಂತ ಒಂದ್ ಮನೆ ನಿನ್ನದ್ ಆಗ್ಬೋದು... ಅದಿರ್ಲಿ! ನಾವೀಗ ಬಂದೂರಿನ ಆ ಕೇರಿಸ್ಥಿತಿ ನೋಡುವಾ!

ಅಲ್ಲಿನ್ ಮಂದುರ್ರು, ಮಾಕ್ಕಿದೆ ದಾಬ್ರಿ, ಸಂಭ್ರಮ, ಆಶ್ಚರ್ಯ ಮನೆ ಚೋಡೇನ ಮುಂಟ್ಟೆ ಮಂಟ್ಟೆ ನೋಡ್ತಾರೆ...ಕನ್ನಡಿ ಮುಂದೆ ನಿಂತು ಇಣುಕಿ

ಇಣುಕಿ ನೋಡ್ತಾರೆ. . ದಿನಾ ಬಯಲಿಗೆ ಹೋಗೊ ಜನ ಅವತ್ತು ಪಾಯಿ ಖಾನೆ ಬರ್ದಿ ಇದದ್ರೂ ಕವೋಡ್ ಮ್ಯಾಕೆ ಕೂತ್ಕಂತಾರೆ.

ಇಷ್ಟೆಲ್ಲಾ ಆಗುವಾಗ ಸೂರ್ಯ ಕಂತುವ ಸಮಯ ಆಯ್ತು. ಗೌಡ್ರ ಹೊಲ ಗೆಯ್ಮೋಕ್ ಹೋಗಿದ್ದ ಎಲ್ಲಾ ಗಂಡಸ್ರೂ, ಎಂಗಸ್ರೂ ತಮ್ ಕೇರಿಗ್ ಹಿಂತಿರುಗಿ ಬಂದ್ ನೋಡ್ತಾರೆ! ಅಲ್ಲೇನಿದೆ? ತಮ್ ಗುಡಿಸಲ್ಲುಗಳು ನಾಪತ್ತೆ ಆಗೋಗವೆ...ತಾವು ಟೆಂಟ್ ಸಿನ್ಮಾದಲ್ಲಿ ನೋಡಿದ್ ಮನೆಗಳಿಗಿಂತಾ ಚೆಂದಾಗಿರೊ ಮನೆಗಳು ಅಲ್ಲಿವೆ—ಇದೇನು? ತಾವು ದಾರಿತಪ್ಪಿ ಬೇರಲ್ಲಿಗಾದರೂ ಬಂದಿದೀವಾ! ಅಂದ್ರೆ ಅದೂ ಇಲ್ಲ. ಹೋಗ್ಲಿ ಒಬ್ರಿಗೆ ದಾರಿ ತಪ್ಪಿರಬೌದು ಅಂದ್ರು ಎಲ್ರಿಗೂ ತಪ್ಪಾಕ್ ಸಾಧ್ಯಾನಾ? ಇದೇನ್ ಎಚಿತ್ರ? ಅಷ್ಟರಲ್ಲಿ ಪಾವು, ಚಟಾಕು ಅರೆ ಚಟಾಕುಗಳೆಲ್ಲಾ ತಮ್ ಅಪ್ಪ, ಅವ್ವ ಬರ್ತಿದ್ದಂಗೆ ಹೋ ಅಂತ ಕೂಕ್ಕಂಡ್ ಬಂದ್ವೋ. . ಆ ಮಕ್ಕಳು ಮಾತು ಕೇಳಿ ಅವ್ರುಗಳ ಅಪ್ಪ ಅವ್ವಂದ್ರಿಗೆ ಇನ್ನೂ ಗಾಬ್ರಿ... ಯಾರಿಗೂ ಮನಿ ಒಳಗೆ ಹೋಗೋಕೆ ಧೈರ್ಯ ಇರ್ಲಿಲ್ಲಾ, ಅದೋ ಅಲ್ಲಿ! ಒಂದ್ ಮನಿ ಹೊರ್ಗಡೆ ಕಾಂಪೌಂಡ್ ಒಳ್ಗಡೇನೇ ನಮ್ಮ ನಾಯಕರಾದ ಶ್ರೀ ಶ್ರೀ ಸೋಮಪ್ಪನವರು ಒಂದು ಆರಾಮ ಕುರ್ಚಿಗೆ ಒರಗಿಕೊಂಡು, ಒಳ್ಳೆ ಗೌಡ್ರ ರೀತೀಲಿ ಕುಂತವ್ರೆ ಅವ್ರುನ್ ನೋಡಿ ಸ್ವಲ್ಪ ಧೈರ್ಯ ಬಂದು, ಅವ್ರ ಎಂಡ್ತಿ ನಿಧಾನವಾಗಿ ಎದರ್ಗಂಡ್ ಬಂದ್ಲು.. ಅವ್ಳ ಹಿಂದೆ ಸೇರು, ಪಾವು, ಚಟಾಕು ಕರಿಯ ಎಂಕ, ಚನಿಯ...... ಶ್ರೀ ಶ್ರೀ ಸೋಮಪ್ಪನವರು ಗಾಂಭೀರ್ಯ ದಿಂದ ಅವರನ್ನೆಲ್ಲ ಒಮ್ಮೆ ನೋಡಿದ್ರು.

"ನೋಡ್ರುಲೇ, ಇದು ನನ್ ಮನಿ. . ನಮ್ಮನಿ ಎಡಮಗ್ಲಲಾಗಿರೋದು ಕರಿಯಂದು...ಅದ್ರ ಪಕ್ಕ ತಿಮ್ಮಂದು... ಈ ಕಡೆ ಪಕ್ಕದ್ದು ಕೆಂಚಣ್ಣಂದು... ಆ ಎದುರು ಮನೆ ಚನಿಯಂದು...ಅದ್ರ ಪಕ್ಕದ್ ತುಕ್ರಂದು......ಈಗ್ ನೀವೆಲ್ಲಾ ನಿಮ್ ನಿಮ್ ಮನೆ ಒಳಗ್ಹೋಗಿ ನೋಡಿ."

"ಅಲ್ಕಣಲೇ ಸೋಮ್ಯಾ. ಈ ಎರಡ್ದಿನದಿಂದ ಎಲ್ಲಿದ್ದಾ ಹ್ವಾಗಿದ್ದೆ? ಇದೆಲ್ಲಾ ಏನ್ಲಾ? ನಮ್ ಗುಡ್ಸಲ್ಲುಗಳೆಲ್ಲಿ? ಈ ಅರಮನೆಗಳು ಎಲ್ಲಿಂದ್ ಬಂದ್ವೋ?"

ಕರಿಯಾ ಉಸಿರು ನಿಲ್ಲಿಸದೇ ಕೇಳಿದ...ಮಾನ್ಯ ಸೋಮಣ್ಣನವರ ಮುಖ ಕೆಂಪಗಾಯ್ತು.

"ಏನ್ಲಾ ಕರಿಯ! ಈಗೇನ್ ತಿಕಾಬಾಯಿ ಮುಚ್ಕಂಡ್ ಹೋಗ್ತಿಯಾ? ಇಲ್ಲಾ ಪುರಾಣ ಊದ್ತಾ ಕೂತಿರ್ತೀಯ! ನನ್ ಏನೂ ಕೇಳ್ಬ್ಯಾಡ ಹೋಗ್ರಲೇ...ನಂಗೇನೂ ಗೊತ್ತಿಲ್ಲ.

ಶ್ರೀ ಶ್ರೀ ಸೋಮಪ್ಪನವರ ಉತ್ತರದಿಂದ ಯಾರಿಗೂ ಸಮಾಧಾನ ಆಗ್ಲಿಲ್ಲ...ಆದ್ರೆ ಕೇಳೋದ್ ಯಾರ್ನ...ಅವ್ನ ಕೆಂಪ್ಗಣ್ ನೋಡಿದ್ರೆ ಯಾಕೋ ಭಯ ಆಗಂಗಿದೆ. ಬೆಳಗ್‌ನಿಂದ ಹೊಲ್ದಾಗೆ ಗೆಯ್ದು ಬಂದ ಆಯಾಸ ಬೇರೆ...ಇರ್ಲಿ ನಾಳೀಕ್ ಇಚಾರಿಸ್ಕಂಡ್ರಾಯ್ತು......

ಕ್ರಮೇಣ ಒಬ್ಬೊಬ್ಬರಾಗಿ ಮಾನ್ಯ ಸೋಮಪ್ಪನವರ ಮನೆಯಿಂದ ಹೊರಟರು...ಗುಂಪು ಕರಗಿತು...

ಬೆಳಗಾಗುತ್ತಲೆ ಗೌಡನ ಸವಾರಿ ಕೇರಿಯತ್ತ. ಈಗಾಗ್ಲೇ ಅವನಿಗೆ ಹಿಂದಿನ ಸಂಜೆ ನಡೆದ 'ಪವಾಡ'ದ ಬಗ್ಗೆ ಸುದ್ದಿ ಮುಟ್ಟಿತ್ತು. ಬಂದು ಅಲ್ಲಿ ನೋಡ್ತಾರೆ! ಏನನ್ನ? ಅಡ್ಡಾದಿಡ್ಡಿ ಬೆಳೆದುಕೊಂಡಿದ್ದ ಗುಡಿಸಲುಗಳೆಲ್ಲಿ? ಈಗ ಕಾಣ್ತಿರೋ ಭವ್ಯ ಸೌಧಗಳೆಲ್ಲಿ? ಹಿಂದಿನ ಕೊಚ್ಚೆ ವಾಸನೆ ಇಲ್ಲ.., ಪರಿಶುದ್ಧವಾದ ರಸ್ತೆಗಳು...ಎಲ್ಲೆಲ್ಲೂ ಲವಲವಿಕೆ, ಕಾಣ್ತವೆ... ಸಿಂಬಳಬುರುಕ ಚಟಾಕುಗಳು, ಹರುಕು ಚಡ್ಡಿ ಮೂಲಕ ತಮ್ಮ ವಿಶ್ವರೂಪ ಪ್ರದರ್ಶನ ಮಾಡಿಸ್ತಾ ಇಲ್ಲ...ತವರ್ ಮನೇಲೂ ಇಷ್ಟ್‌ದಿನ ಇಲ್‌ದಿದ್ದ ವೈಭವ ಆ ಒಂದೊಂದು ಮನೆಗಳಲ್ಲೂ...ಇದೆಲ್ಲಾ ಹ್ಯಾಗೆ ಆಯ್ತು...ತಲೆ ಕೆರ್‌ಕಂಡ್ರೂ ಅವ್ನಿಗೇನೂ ಗೊತ್ತಾಗ್ಲಿಲ್ಲ. ಈಗಾಗ್ಲೇ ಗೌಡ ಬಂದ್ ಸುದ್ದಿ ಅಲ್ಲಿ ಎಲ್ರಿಗೂ ಗೊತ್ತಾಗಿದ್ರೂ ಒಬ್ರೂ ಹೊರ್ಗೆ ಬರ್ಲಿಲ್ಲಾ..ಏಂತಾ ಮಾಡೋದು? ಗೌಡ ರಸ್ತೆ ಮಧ್ಯೆ ನಿಂತ್ಕಂಡ್ ಒಮ್ಮೆ "ಲೊ ಕರಿಯಾ, ಚೆನ್ನ, ಎಲ್ಲಾ ಎಲ್ ಹಾಳಾಗ್ಹೋದ್ರೋ ಬರ್ರೋ ಬ್ಯಾಗಾ!" ಅಂತ ಕೂದ್

ಹಾಕಿದ್ರೂ ಯಾರೂ ಬರ್ಲಿಲ್ಲ. ಇನ್ನೂ ಒಂದೆರಡ್ ಸಲ ಬೊಬ್ಬೆ ಹಾಕಿದ್ರು. ತಮ್ ಮಂಕ್ಳ ಜೊತೆ ಆರಾಮವಾಗಿ ಆಟ ಆಡ್ತಿದ್ ನಾಯಕರ ಕಿವಿಗೆ ಗೌಡ್ರ ಗದ್ಲ ಬಿತ್ತು. ನಿಧಾನವಾಗಿ ಬಂದ್ರು ಕೈಯಲ್ಲಿ 555ನೇ ಬ್ರ್ಯಾಂಡ್‌ನ ಸಿಗರೇಟು ಉರೀತಿತ್ತು.. ಸೀದ್ಕಂಡೇ ಗೌಡ್ರ ಬಳಿ ಬಂದು ಗತ್ತಲ್ಲಿ ಕೇಳಿದ್ರು

"ಏನು ಗೌಡ್ರು ಇಷ್ಟು ದೂರ ಪಾದ ಬೆಳ್ಸಿದ್ದು? ನಮ್ ಗಂಡ್ಲು ತಾವ್ಯೇ ಬಂದ್ರು? ನಾನೀಗ ಹೊರ್ಗೆ ಹೋಗ್ಬೇಕಾ?"

"ಸೂಳೆ ಮಗ್ನೆ"...ಏನ್ ಹೇಳ್ಲಿಕ್ಕೂ ಗೊತ್ತಾಗ್ದೆ ಗೌಡ ಅಬ್ಬರಿಸಿದ, "ಈ ಮೂರ್ದಿನ್‌ದಿಂದ ಎಲ್ಲಿ ಹಾಳಾದ್ ಹೋಗಿದ್ಯೋ..."

ನಾಯಕರು ಉತ್ತರಿಸಲಿಲ್ಲ. ಹಿಂದಿನ ಅಭ್ಯಾಸ. ಅಷ್ಟು ಸುಲಭವಾಗಿ ಹೋಗ್ಲಿಲ್ಲ. ಗೌಡಂಗೆ ಸಿಟ್ಟು ತಡೀಲಿಕ್ಕಾಗ್ಲಿಲ್ಲ.

"ಏನ್ಲಾ ಅಂಗೇ ನೋಡ್ತಾ ನಿಂತಿ? ಹೇಳಿದ್ ಕೇಳಿಸ್ಲಿಲ್ವೇನೋ ಬೋಳಿಮಗ್ನೆ"

ಶ್ರೀ ಶ್ರೀ ಸೋಮಪ್ಪನವರ ಕೈ ಅಪ್ರಯತ್ನವಾಗಿ ಉಂಗುರದ ಬೆರಳು ಸವರಿತು. ಯಥಾಪ್ರಕಾರ ಭೂತ ಬಂತು.

"ಏನಪ್ಪಣೆ! ನಾನು ಉಂಗುರದ ಗುಲಾಮ"

ಸನ್ನೆ ಮಾಡಿ ಭೂತನ್ನ ಕಿವಿಹತ್ರ ಕರೆದ್ರು. ಅದ್ರ ಕಿವೀಲ್ ಅದೇನ್ ಹೇಳಿದ್ರೂ ನಮ್ ಕಿವಿಗೆ ಕೇಳಿಸ್ತಿಲ್ಲ ಅಲ್ವ ಓದುಗ. ನಿಮ್ ಮನಸ್ನಲ್ಲಿ ಇನ್ನೂ ಒಂದ್ ಪ್ರಶ್ನೆ ಇರ್ಬೋದು ಅಲ್ವೇ.. .ಗುಡುಗಿನ ಶಬ್ದ ಮಿಂಚಿನ ಬೆಳಕಿನೊಂದಿಗೆ ಪ್ರತ್ಯಕ್ಷ ಆದ ಭೂತ ಗೌಡನ್ ಕಣ್ಣಿಗೆ ಯಾಕೆ ಕಾಣಿಸ್ಲಿಲ್ಲ? ಅಥ್ವಾ ತಮ್ ತಮ್ ಮನೆಬಾಗಿಲ ಸಂದೀಲಿ, ಕಿಟಕಿ ಕಂಡಿಯಿಂದ ನೋಡ್ತಾ ನಿಂತಿದ್ ಕರಿಯ, ಚನಿಯ—ಇವರ ಕಣ್ಣಿಗೂ ಯಾಕೆ ಕಾಣಿಸ್ತಿಲ್ಲ? ನಂಗೇನ್ ಗೊತ್ತು? ಅದ್ನ ನಾನ್ ಹ್ಯಾಗ್ ಹೇಳ್ಲಿ? ಅದು ಎಷ್ಟಾದ್ರೂ ಭೂತ. ಪರಿಸ್ಥಿತಿ ನೋಡಿದ್ರೆ ನಮ್ ನಾಯಕರನ್ನ ಹೊರತುಪಡಿಸಿ ಬೇರೆ ಯಾರ ಕಣ್ಣಿಗೂ ಬಹುಷಃ ಕಾಣ್ಸೋದಿಲ್ಲಾ ಅಂತ ಅನ್ಸುತ್ತೆ. ಆದ್ರೆ ನಮ್ ಕಣ್ಗೆ ಹ್ಯಾಗ್ ಕಾಣ್ಸುತ್ತೆ? ಅಂತ ಯೋಚಿಸುತ್ತಿದ್ದಿಯೊ? ಇದೇನು ಓದುಗ

ಇಂತಾ ದಡ್ಡ ಪ್ರಶ್ನೆ ಕೇಳ್ತಿ? ನಾವು ಎಲ್ಲರ ಮನಸ್ಸನ್ನೂ ಒಳಹೋಗಿ ನೋಡ್ತೇವೆ. . .ಎಲ್ಲಿ ಅಂದ್ರೆ ಅಲ್ಲಿ ಹಾರಾಡ್ತೇವೆ. ನಮ್ ಕಣ್ಗೆ ಕಾಣದೇ ಇರುವಂತಾದ್ದು ಏನು ಅಂತ? ಯಾಕಂದ್ರೆ, ನಾವು ಈ ಕಥೆಯ ಒಳಗಿನ ಒಂದು ಪಾತ್ರ ಅಲ್ಲ. . .ಬರೀ ಸಾಕ್ಷಿಗಳು ಅಷ್ಟೇ ಅಲ್ವಾ! ಸರಿ ನಾವ್ ಸುಮ್ನೆ ಯೋಚ್ನೆ ಮಾಡ್ತಾ ಮಾಡ್ತಾ ನಮ್ ತಲೆ ಯಾಕೆ ಬಿಸಿ ಮಾಡ್ಕಳದು? ಬದಲಿಗೆ ಅಲ್ಲೇನಾಗ್ತಿದೆ. ಅದ್ನ ನೋಡೋಣ.

ನಿಧಾನವಾಗಿ ಥಳಿ ಗಾಳಿ ಬೀಸಿದಂಗಾತು,ಗೌಡಂಗೆ-ಮೈ ಮೇಲೆ ನಾಕು ಕಾವಸ್ತೆಗೆ ಇದ್ದ ಶಾಲನ್ನ ಸರಿಯಾಗಿ ಸುತ್ತಿಕೊಂಡ—ಅರೆ! ಇದೇನಿದು? ಯಾರೋ ಕೈ ಹಾಕಿ ಎಳೆದಂಗಾತು. ನೋಡ್ತಾ ನೋಡ್ತಾ ಇದ್ದಂಗೆ ಶಾಲು ಆಕಾಶದಲ್ಲಿ ಹಾರಿಹೋಯ್ತು.. ನಂತ್ರ ಶರಟೂ. .ಗೌಡರಿಗೆ ಗಾಬ್ರಿ ಆಯ್ತು—ಇದೇನಿದು? ನೋಡ್ತಾ ನೋಡ್ತಾ ಶರಟು.. ಇಲ್ಲ—ತೋಳ್ನೆ ಸಡುದ್ಲಿಕ್ಕೆ ಪ್ರಾರಂಭ ಆಯ್ತು. ಕಚ್ಚೆ ಗಟ್ಟಿಯಾಗಿ ಇಡ್ಕಂಡ—ಆದ್ರೆ, ಅವನ ಶಕ್ತಿ ಮೀರಿಯೋ ಹೋರಾಡಿದ್ರೂ ಕಚ್ಚೆ ಹಾರೇ ಹೋಯ್ತು. ಇನ್ ಉಳಿದದ್ದು ಚಡ್ಡೀ ಮಾತ್ರ, ಗೌಡ ತಕಪಕ ತಕಪಕ ಕುಣಿದಾಡಿದ, ಕಣ್ಣಲ್ಲಿ ನೀರು ಬರೋದು ಒಂದು ಬಾಕಿ, ಆದ್ರೇನು? ಅಲ್ಲಿ ಆರಾಮವಾಗಿ ನಿತ್ಕಂಡ ಶ್ರೀ ಶ್ರೀ ಸೋಮಪ್ಪನವರು 555ನೇ ಮಾಡೆಲ್ ಸಿಗರೇಟು ಸೇದುತ್ತಾ ಹೊಗೇನಾ ಗೌಡನ್ ಮುಖದ್ ಮ್ಯಾಗ್ ಕಳ್ಸಿದ್ರು. ಮನೀ ಒಳ್ಗಿಂದ ಒಬ್ಬೊಬ್ಬರಾಗಿ ಬರ್ತಾ ಬರ್ತಾ ಇಡೀ ಕೇರಿನೇ ಅಲ್ಲಿ ಸೇರ್ಕ್ಬಿಟ್ಟಿದೆ. ನಾಚ್ಗೆ ಆಗಿ ಗೌಡ ಅಲ್ಲಿಂದ್ ಓಡಿಹೋಗೋಕೆ ಪ್ರಯತ್ನಪಟ್ರೆ-ಆದ್ರೆ ಯಾರೋ ಹಿಡಿದು ನಿಲ್ಲಿಸ್ದಂಗೆ ಕಾಲೇ ಏಳ್ತಾ ಇಲ್ಲ. ಚಡ್ಡೀ ಒಳ್ಗೇ ಒಂದೂ, ಎರಡೂ ಆಯ್ತು—ಇಷ್ಟಕ್ಕೆ ನಿಲ್ಲಲಿಲ್ಲ—ಗೌಡ್ನ ಮಾನಾಪಹರಣ ಪ್ರಾರಂಭ ಆಯ್ತು ಚಡ್ಡೀ ಗಂಟು ಬಿಚ್ಚಿಕೊಳ್ತು—ನಿಧಾನವಾಗಿ ಚಡ್ಡೀ ಜಾರಿಹೋಯ್ತು—ಈಗ ಗೌಡ ತನ್ನ ಹುಟ್ಟಿದುಡಂಗೆಯಲ್ಲಿ ನಿಂತಿದಾನೆ—ಎಲ್ರೂ ಬಾಯಿ ಬಿಟ್ಕಂಡ್ ನೋಡ್ತಾ ಅವ್ರೆ—ಅವ್ರ ಕಣ್ಣಿಗ್ ಕಾಣ್ಸಿದ್ ಇಷ್ಟು—ಗೌಡ್ರು ಬಂದ್ರು ಸೋಮ್ಯಾನನ್ನ ತರಾಟೆಗೆ ತಗಂಡ್ರು— ಮುಂತ್ತೆ ಏನಾಯ್ತೊ ಗೊತ್ತಿಲ್ಲ. ತಾವ್ ಹೊದ್ಕಂಡಿದ್ ಶಾಲ್ನ ಮೇಲಕ್ಕೆ ಎಸೆದ್ರು, ಆ ಮೇಲೆ

ಶರಟು—ಕಚ್ಚೆ—ಕಡೆಗೆ ಸುತ್ತಿಲ್ಲ ಹೆಂಗಸ್ರು ಮಕ್ಳು ಏನನ್ನೂ ನೋಡ್ದೇ ಕಡೆಗೆ ಚಡ್ಡೀ ಕೂಡಾ ಬಿಚ್ಚಿ ನಿಂತವ್ರು.. ಇದೇವ್ ಗೌಡ್ರಿಗ್ ಬುದ್ಧಿಗಿದ್ದಿ ಕೆಡ್ತು— ಒಂದೇ ಘಟನೆ—ಅವರವರ ಭಾವಕ್ಕೆ ತಕ್ಕಂತೆ—ಯಾರೋ ರಥಾಡಿಸಿ ಒದ್ದಂತಾಗಿ ಗೌಡ ಕೆಂಗ್ಗರಿಸಿ ಬಿದ್ದ. ಎದ್ದವ್ನೆ ಸತ್ನೋ, ಕೆಟ್ನೋ, ಅಂತ ಅಲ್ಲಿಂದ್ ಓಡ್ಲಿಕ್ ಶುರು ಮಾಡಿದ—ಶ್ರೀ ಶ್ರೀ ಸೋಮಪ್ಪ ನವರು ಮಾತ್ರ ಶ್ರೀಮದ್ಗಾಂಭೀರ್ಯದಿಂದ ತಮ್ ಮನೆ ಕಡೆ ಹೊರಟ್ರು, ದಾಬರಿ ಆಗಿದ್ ಜನ ಅಲ್ಲೆ ತಮ್ ತಮ್ಮಲ್ಲೇ ಮಾತಾಡ್ತಾ ನಿಂತ್ಕಂಡ್ರು—

ಮರುದಿನ ಬೆಳಿಗ್ಗೆ ಗೌಡನ ಹೆಣ ಹೊಳೆ ಬದೀಲಿ ತೇಲುತ್ತಾ ಬಿದ್ದಿತು—

ಗೌಡನ ಸಾವು ಬೆಂದೂರಿನ ಜನಗಳ ಮೇಲೆ ಬಹುದೊಡ್ಡ ಪರಿಣಾಮ ಬೀರಿತ್ತು.. ಗೌಡ ಬಟ್ಟೆ ಬಿಚ್ಚಿ ಓಡಿದ ಸಮಾಚಾರ ನಾನಾ ಊಹಾಪೋಹಗಳಿಗೆ ದಾರಿ ಮಾಡಿಕೊಟ್ಟಿತ್ತು. ಇವೆಲ್ಲದರ ಪರಿಣಾಮ ನಮ್ಮ ನಾಯಕರ ಹೆಸರು ಊರ ಜನರ ಬಾಯಲ್ಲಿ ಎಲೆ-ಅಡಿಕೆ ಆದದ್ದು. ಶ್ರೀ ಶ್ರೀ ಸೋಮಪ್ಪನವರು ರಸ್ತೆಯಲ್ಲಿ ನಡೆದು ಬರುತ್ತಿದ್ದರೆ ಜನ ಅವ್ರನ್ನ ಭಯಮಿಶ್ರಿತ ಕುತೂಹಲದಿಂದ ನೋಡುತ್ತಿದ್ದರು. ಶ್ರೀ ಶ್ರೀ ಸೋಮಪ್ಪನವರು ಎಲ್ಲಿಗ್ ಹೋಗ್ಲಿ, ಎಲ್ಲಿಗ್ ಬರ್ಲಿ, ಅದೇ ದೊಡ್ಡ ಸುದ್ದಿ. ಶ್ರೀ ಶ್ರೀ ಸೋಮಪ್ಪನವರಿಗಾದರೂ ಈಗ ಮಾಡ್ಲಿಕ್ ಏನೂ ಕೆಲ್ಸ ಇರ್ಲಿಲ್ಲ-ಮೈಮುರಿದು ದುಡೀಬೇಕಾದ ಅಗತ್ಯವೂ ಇರಲಿಲ್ಲ. ನಮ್ಮ ನಾಯಕರೇ ಏಸು? ಆ ಕೇರಿಯು ಯಾರಿಗೂ ಈಗ್ ಕೂಲಿಗ್ ಹೋಗ್ಬೇಕಾದ್ದೇ ಇರಲಿಲ್ಲ. ಪರಿಣಾಮ ಊರ ಹೊಲಗಳು ಹಾಳು ಬಿದ್ದವು.... ಹಾಯಿಖಾನೆ ತೊಳೆಯಲೂ ಜನ ಇಲ್ಲ. ನೊಣ, ಸೊಳ್ಳೆಗಳು ತಮ್ಮ ಸಾಮ್ರಾಜ್ಯವನ್ನ ನಾಯಕರ ಕೇರಿ ಒಂದನ್ನ ಹೊರತುಪಡಿಸಿ ಉಳಿದೆಲ್ಲ ಕಡೆ ಹರಡಿಸಿದ್ದವು. ಪರಿಸ್ಥಿತಿ ಹೀಗಿದ್ದರೆ, ಆ ಕೇರಿಗಳ ಜನಗಳ ದೃಷ್ಟಿಯಲ್ಲಂತೂ ಶ್ರೀ ಶ್ರೀ ಸೋಮಪ್ಪನವರು ಸಾಕ್ಷಾತ್ ದೇವರೆ ತಮಗೆ ಏನ್

ಬೇಕಾದ್ರು, ಮಾನ್ಯ ಸೋಮಪ್ಪನವರ ಸಮಯ ಕಾದರೆ ಆಯ್ತು. ಶ್ರೀ ಶ್ರೀ ಸೋಮಪ್ಪನವರಿಗೆ ಇಂತಾ ಶಕ್ತಿ ಹ್ಯಾಗ್ ಬಂತು ಅಂತ ಯಾರಿಗೂ ಗೊತ್ತಿಲ್ಲ. ಇದ್ರ ಬಗ್ಗೆ ಶ್ರೀ ಶ್ರೀ ಸೋಮಪ್ಪನವರೂ ಏನೂ ಹೇಳ್ತಿರ್ಲಿಲ್ಲ. ಒತ್ತಾಯ ಮಾಡಿ ಕೇಳೊ ಧೈರ್ಯ ಮಾತ್ರ ಯಾರಿಗೂ ಇರ್ಲಿಲ್ಲ. ದಿನ ಕಳೆದಂತೆ ನಾಯಕರು ನಿಗೂಢ ವ್ಯಕ್ತಿ ಆಗ್ತಾನೇ ಹೋದ್ರು— ಈಗ ಮಾನ್ಯ ಸೋಮಪ್ಪನವರು ಹಿಂದಿನ ಸೋಮ್ಯಾ ಅಲ್ಲ— ಉಂಗುರದ ಸೇವಕ ಅವರನ್ನ ಪ್ರತಿನಿತ್ಯ ಹೊಸ ಲೋಕದ ದರ್ಶನ ಮಾಡಿಸುತ್ತಿತ್ತು. ಹೊಸ ಹೊಸ ಅನುಭವಗಳಿಗೆ ಅವರು ತಮ್ಮನ್ನ ಒಡ್ಡಿಕೊಳ್ತಾ ಹೋದ್ರು— ಮನಸ್ಸು ಬಂದ ಕಡೆ ಹೋದ್ರು—ಆಗ್ ಬಯಸಿದ್ದೆಲ್ಲಾ ಸಿಕ್ತಿತ್ತು. . ಅವರ ಜಗತ್ತು ವಿಸ್ತೀರ್ಣಗೊಂಡಿತ್ತು—ಇವೆಲ್ಲದರ ಪರಿಣಾಮ, ಒಬ್ಬ ಹೊಸಾ ಸೋಮಪ್ಪನವರನ್ನ ನೋಡಬಹುದಿತ್ತು. ಯಾವಾಗ ಮನುಷ್ಯನಿಗೆ ಬಯಸಿದ್ದೆಲ್ಲಾ ಸಿಗ್ತಾ ಹೋಗ್ತದೆಯೊ, ಆಗ ಅವನಲ್ಲಿ ಅಸಂತೃಪ್ತಿ ಹೆಚ್ಚಾಗ್ತಾ ಹೋಗ್ತದೆ. ತನಗೆ ಏನು ಬೇಕು? ಅನ್ನೋದು ಅವನಿಗೆ ಗೊತ್ತಾಗೊಲ್ಲ—ಆದ್ರೆ ತನಗೆ ಎಲ್ಲಾ ಬೇಕು ಅಂತ ಅನ್ನಿಸ್ತಾ ಹೋಗ್ತದೆ— ನಮ್ಮ ನಾಯಕರಿಗಾದದ್ದೂ ಅಷ್ಟೇ—ಇದೇ ಸಮಯಕ್ಕೆ ದೇಶದಲ್ಲೆಲ್ಲಾ ಚುನಾವಣೆ ಸುದ್ದಿ ಹರಡತೊಡಗಿತು. ಮಾನ್ಯ ಸೋಮಪ್ಪನವರು ಚುನಾವಣೆಗೆ ನಿಲ್ಲುವಂತೆ ಒತ್ತಾಯ ಬರತೊಡಗಿತು. ಅವರ ಮನಸ್ಸೂ ಅತ್ತಲೇ ಹರಿಯುತೊಡಗಿತು.

ಸೋಮಣ್ಣನವರ ಮನೋಭಾವ ಹೀಗೆ ಬೆಳೀತಿದ್ರೆ, ಊರವರ ದೃಷ್ಟಿಯಲ್ಲಂತೂ ಸೋಮಪ್ಪನವರು ಚುನಾವಣೆಗೆ ನಿಲ್ತಾರೆ ಅಂದಾಗಲೇ ಅವರು ಗೆದ್ದಂತೆ ಇಂತಾ ವ್ಯಕ್ತಿ ಬೆಂಬಲ ಯಾವ ಪಕ್ಷಕ್ ಬೇಡಾ! ಆಡಳಿತ ಪಕ್ಷ ಮತ್ತು ವಿರೋಧಪಕ್ಷ-ಇವೆರಡೂ ಪಕ್ಷಗಳ ನಾಯಕರುಗಳಂತೂ ಈಗ ಶ್ರೀ ಶ್ರೀ ಸೋಮಪ್ಪನವರ ಮನೆ ಬಾಗಿಲನ್ನ ಕಾಯುವ ಪ್ರಸಂಗ ಬಂತು. ಹಾಗಾಗಿ ಅಸಮಾನ್ಯಪುರದ ಸಾಕ್ಷಾತ್ ಪ್ರಧಾನ ಮಂತ್ರಿಗಳ ಕಾರ್ಯದರ್ಶಿಗಳೇ ಒಮ್ಮೆ ತಮ್ಮ 'ಬಾಸ್' ಸಂದೇಶ ಹೊತ್ತು ಮಾನ್ಯ ಸೋಮಪ್ಪನವರ ಮನೆಗೆ ದಯಮಾಡಿಸಿದ್ದರು...

ಶ್ರೀ ಶ್ರೀ ಸೋಮಪ್ಪನವರೊಮ್ಮೆ ಕಾರ್ಯದರ್ಶಿಗಳನ್ನ ಮೇಲಿನಿಂದ ಕೆಳಗೆ ನೋಡಿದರು. ಒಂದೆರಡು ನಿಮಿಷ ಮಾತಾಡಲಿಲ್ಲ. ನಂತ್ರ ಇದ್ದಕ್ಕಿದ್ದಂತೆ ಹೇಳಿದ್ರು

"ಆಯ್ತು! ನೀವು ಬಂದ ವಿಷಯ ಅರ್ಥವಾಯ್ತು. ನಂದೊಂದ್ ಪ್ರಶ್ನೆ...ಈ ಚುನಾವಣೇಲಿ ನಾನು ನಿಮ್ ಪಕ್ಷಕ್ಕೆ ಬೆಂಬಲ ಕೊಟ್ರೆ ನಂಗೇನ್ ಸಿಗುತ್ತೆ?"

"ನೀವು ಅಷ್ಟು ಮಾಡಿ ಸಾಕು. ನಮ್ ಬಾಸ್ ಮನಸ್ಸಿಗೇನಾದ್ರೂ ಬಂತೂಂದ್ರೆ ನೀವು ಮಿನಿಷ್ಟರ್ ಆಗ್ಬೋದು—"

"ಒಂದ್ವೇಳೆ ನನ್ನ ಪಿ. ಎಂ. ನೇ ಮಾಡ್ಬೇಕಂತ ಕೇಳಿದ್ರೆ?"

ಮಾನ್ಯ ಸೋಮಪ್ಪನವರು ಕಾರ್ಯದರ್ಶಿಗಳನ್ನ ನೋಡ್ತಾ ಹಠಾತ್ತಾಗಿ ಪ್ರಶ್ನಿಸಿದರು—

"ಹ್ಹ! ಹ್ಹ! ಹ್ಹ! ಅದ್ಹೇಗಾಗುತ್ತೆ? ನಮ್ ಬಾಸ್ ಇರ್ಬೇಕಾದ್ರೆ! ನಿಮ್ಮನ್ ಬೇಕಾದ್ರೆ ಕ್ಯಾಬಿನೆಟ್ ಮಂತ್ರಿ ಮಾಡೋಣ" ಕಾರ್ಯದರ್ಶಿಗಳು ಸ್ವತಃ ಪ್ರಧಾನಮಂತ್ರಿ ಶೈಲಿಯಲ್ಲಿ ಉತ್ತರಿಸಿದರು.

ಶ್ರೀ ಶ್ರೀ ಸೋಮಪ್ಪನವರು ಒಮ್ಮೆ ಕಣ್ಣು ಮುಚ್ಚಿ ಆರಾಮವಾಗಿ ಕೂತರು, ಎರಡು ನಿಮಿಷ ಮಾತಾಡ್ಲಿಲ್ಲ— ನಂತ್ರ ನಿಧಾನವಾಗಿ ಹೇಳಿದ್ರು

"ನೋಡಿ! ನಿಮ್ ಪಿ. ಎಂ. ಗೆ ಹೋಗಿ ಹೇಳಿ—ನಾನೇ ಒಂದ್ ಪಕ್ಷ ಕಟ್ತಿದ್ದೇನೆ— ಅದ್ಕೆ ಒಂದ್ ಸೀಟಿಗೇನಾದ್ರೂ ನಿಮ್ ಬಾಸ್ ಅರ್ಜಿ ಕೊಟ್ರೆ ಹೇಗಾದ್ರು ಪ್ರಯತ್ನ ಮಾಡ್ತೀನಿ—ಈಗ ತಾವು ಹೋಗ್ಬೋದು."

ಕಾರ್ಯದರ್ಶಿಗಳ ಕಪಾಳಕ್ಕೆ ಹೊಡೆದ ಹಾಗೆ ಆಯ್ತು—ದುರ್ದಾನ ತೆಗೆದುಕೊಂಡವರಂತೆ ಅಲ್ಲಿಂದ ಜಾರಿದರು—ಕಾರ್ಯದರ್ಶಿಗಳ ಕಾರು ಹಾಗೆ ಜಾರ್ತಿದ್ದಂತೆ ಹಿಂದೆ ನಾಲ್ಕು ಕಾರುಗಳೂ ವಿಭಿನ್ನ ವಿರೋಧಿ ಪಕ್ಷಗಳಿಗೆ ಸೇರಿದ್ದವು— ಆ ಎಲ್ಲಾ ವಿರೋಧ ಪಕ್ಷದ ವಕ್ತಾರರನ್ನ ನಾಯಕರೊಮ್ಮೆ ತುದಿಗಣ್ಣಿನಿಂದ ಹಾಗೇ ನೋಡಿದರು— ಅವರಿಗೇ ಆಶ್ಚರ್ಯ—ತಮ್ಮ ಹೆಸರು

ಅಸಮಾನ್ಯಪುರದ ಉದಗಲಕ್ಕೂ ಹಬ್ಬಿದ್ದನ್ನ ಕಂಡು ಸ್ವತಃ ಅವರಿಗೇ ಅಸೂಯೆ. "ಭಲಾ ಸೋಮ್ಯಾ! ನಿನ್ನಪ್ಪ ನಿನ್ನ ಹುಟ್ಟಿದ್ದಕ್ಕೆ ಸಾರ್ಥಕ ಆಯ್ತೋ ಮಗನೇ!" ಅಂದ್ಕೊಂಡ್ರು. ಮರುಕ್ಷಣ ಶ್ರೀಮದ್ಗಾಂಭೀರ್ಯ ದಿಂದ ನಿಧಾನವಾಗಿ ಹೇಳಿದ್ರು.

"ತಮ್ಮಂತಹಾ ದೊಡ್ಡ್ ದೊಡ್ಡ್ ನಾಯಕರುಗಳು ನಮ್ ಮನೆ ಬಾಗ್ಲಿಗ್ ಬಂದದ್ದು ತುಂಬಾ ಸಂತೋಷ— ಆದ್ರೆ ಒಂದ್ ಮಾತು— ನನ್ ಬೆಂಬಲ ನಿಮ್ ಪಕ್ಷಕ್ ಬೇಕಾದ್ರೆ, ನೀವು ನನ್ನ ನಿಮ್ ಪಿ. ಎಂ, ಅಂತ ಒಪ್ಪಿಕೊಬೇಕು".

ನಾಯಕರುಗಳು ಪರಸ್ಪರ ಮಿಕಿಮಿಕಿ ನೋಡ್ಕೊಂಡ್ರು—ಶ್ರೀ ಶ್ರೀ ಸೋಮಪ್ಪನವರು ಸಣ್ಣಪುಟ್ಟ ಮಂತ್ರಿಗಿರಿ ಕೇಳಿದ್ರೆ ನೋಡ್ಬೋದಾಗಿತ್ತು. ಆದ್ರೆ ಕೇಳ್ತಾ ಕೇಳ್ತಾ ಪಿ. ಎಂ, ಆಗೋಕೇ ನೋಡೋದ? ಆ ಸಂಪತ್ತಿಗೆ ನಾವ್ಯಾಕೆ ನಾಯಕರು ಅಂತ ಅನ್ನಿಸ್ಕೊಬೇಕು—ಆದ್ರೆ ಸೋಮಪ್ಪನವರ ಸಾಮರ್ಥ್ಯ ಈಗಾಗ್ಲೇ ಅವರ ಗಮನಕ್ಕೆ ಬಂದ ಮಾತು—ಚಿತಪ್ರನ್ನ ಪಕ್ಷದ ಮುಖಂಡರು ಹೇಳಿದ್ರು, ಖಂಡಿತವಾದ ಸ್ವರದಲ್ಲಿ—

"ಸೋಮಪ್ಪನವರೆ, ನೀವು ಏಕ್ದಂ ಪಿ. ಎಂ. ಕುರ್ಚಿಗೇ ಆಸೆ ಪಟ್ರೆ ಹೇಗೆ? ಆ ಸ್ಥಾನ ಅಂದ್ರೇನು? ಅದ್ಕೆ ಎಷ್ಟು ಅನುಭವ ಬೇಕು, ಏನ್ಕತೆ? ಅದೇನ್ ಹುಡುಗಾಟಾನಾ?"

ಶ್ರೀ ಶ್ರೀ ಸೋಮಪ್ಪನವರು ಉತ್ರ ಕೊಡಲಿಲ್ಲ— ಸುಮ್ನೆ ಮುಗುಳ್ನಕ್ಕರು.. ಮರುಕ್ಷಣದಲ್ಲಿ ತಲೆ ಎತ್ತಿ ಸೂರು ನೋಡ್ತಾ ಕೂತ್ಕೊಂಡ್ರು—ನಾಯಕರು ಕಾದೇಕಾದ್ರು—ಐದು ನಿಮಿಷ ಆಯ್ತು— ಹತ್ತು ನಿಮಿಷ ಆಯ್ತು—ಊನ್ನ ಸೋಮಪ್ಪನವರ ಸಮಾಧಿ ಸ್ಥಿತಿಗೆ ಧಕ್ಕೆ ಬರ್ಲಿಲ್ಲ—ಕಡೆಗೆ ಒಬ್ಬೊಬ್ಬರೆ ನಾಯಕರು 'ಬರ್ತೀವಿ' ಅಂತ ನಮಸ್ಕಾರ ಮಾಡಿ ಎದ್ರು— ಆಗ್ಲೂ ಸನ್ಯಾಸಿ ಸೋಮಪ್ಪನವರ ಮುಖದಲ್ಲಿ ಮುಗುಳ್ನಗೆಯೆ.

ಮರುದಿನದ ಪತ್ರಿಕೆಯಲ್ಲಿ ಬಿಸಿ ಬಿಸಿ ಸುದ್ದಿ—ಶ್ರೀ ಶ್ರೀ ಸೋಮಪ್ಪ ನವರು ಒಂದು ಹೊಸ ರಾಜಕೀಯ ಪಕ್ಷ ಕಟ್ಟಿದ್ದಾರೆ, "ಬಡವರ ಪಕ್ಷ" ಅಂತ— ಚುನಾವಣೆಗೆ ನಿಲ್ತಿದ್ದಾರೆ— ಬಡಜನರ ನಿರ್ಮೂಲನಕ್ಕಾಗಿ, ಕ್ಷಮಿಸಿ, ಜನತೆಯ ಬಡತನದ ನಿರ್ಮೂಲನಕ್ಕಾಗಿ ಟೊಂಕ ಕಟ್ಟಿ ನಿಂತಿರುವ ಶ್ರೀ ಶ್ರೀ ಸೋಮಪ್ಪನವರನ್ನು ಮತ್ತು ಅವರ ಪಕ್ಷದ ಅಭ್ಯರ್ಥಿಗಳನ್ನ ಅವಿರೋಧವಾಗಿ ಚುನಾಯಿಸಬೇಕು.

ಏನು ಓದುಗ! ಇದೊಳ್ಳೆ ರಾಜಕೀಯ ಶುರು ಆಯ್ತು ಅಂತ ಪುಸ್ತಕ ಮುಚ್ಚೋ ಪ್ರಯತ್ನ ನಡೆಸಿದ್ದಿ, ನನ್ನಾಣೆ ಹೇಳ್ತೀನೆ, ಇದು ರಾಜ ಕೀಯ ಕಥೆ ಅಲ್ಲ... ಅದರ ಉದ್ದೇಶವೂ ಲೇಖಕನಿಗೆ ಇಲ್ಲ... ಅವನ ಉದ್ದೇಶ 'ಕೇವಲ' ಮತ್ತು 'ಕೇವಲ ಮಾನ್ಯ ಸೋಮಪ್ಪನವರ ಬದುಕನ್ನ, ಆದರ ಪರಿವರ್ತನೆಯ ಘಟ್ಟವನ್ನ, ಅದು ಹೇಗಿದೆಯೊ ಹಾಗೆ, ಅದು ಹೇಗಾಗುತ್ತದೆಯೊ ಹಾಗೇ, ನಮ್ಮ ಕಣ್ಣಿಗೆ ಕಂಡಂತೆ ಚಿತ್ರಿಸೋದು. ಈಗ ಕಾಣುವುದಕ್ಕೆ ನೀನು ಹೊರಟಾಗಿಲ್ಲ, ಯಾಕೇಂದ್ರೆ, ಈ ಮಾನ್ಯ ಸೋಮಪ್ಪನವರ ಬದುಕನ್ನ ನನ್ನೊಟ್ಟಿಗೆ ನೀನೂ ನೋಡ್ತಾ ಇರೊ ಸಂಗತೀನ ಮರೀಬೇಡ... ನೀನೆ ನಂಗೆ ಈ ಕಥೆ ಹೇಳ್ಬೋದಿತ್ತು... ಆದ್ರೆ, ನೀನು ನಿನ್ ಬದುಕಿನ ಹೋರಾಟದಲ್ಲಿ ಶ್ರೀ ಶ್ರೀ ಸೋಮಪ್ಪನವರ ಬದು ಕನ್ನ ಕಾಣ್ತಿದ್ದರೂ, ಅದ್ನ ಯೋಚ್ನೆ ಮಾಡ್ಲಿಕ್ ಹೋಗ್ಲಿಲ್ಲ... ಹಾಗ್ ನೋಡಿದ್ರೆ, ನಿನ್ ಬದುಕ್ನೇ ಸರಿಯಾಗ್ ನೋಡ್ಕೋಕೂ ನಿಂಗೆ ಪುರು ಸೊತ್ತಿಲ್ಲ... ಬೇಸರ ಮಾಡಿಕೊಬೇಡಾ, ಇದು ವಾಸ್ತವ ಸ್ಥಿತಿ... ನಾನ್ನ ನನ್ನ ಬದುಕನ್ನ ನೋಡ್ತಿದೇನೆ...ನಿನ್ನೊಡನೆ ಮಾತಾಡ್ತಾ ನಿನ್ ಬದುಕನ್ನೂ ನೋಡ್ತೀನೆ. ಹಾಗೇ ಮಾನ್ಯ ಸೋಮಪ್ಪನವರ ಬದುಕನ್ನೂ ಸಹಾ ನೋಡ್ತೀನೆ ನೋಡಿದ್ದನ್ನ ಯಾರಾದ್ರೂ ನಾಲ್ಕು ಜನಕ್ಕೆ ಹೇಳ್ಬೇಕು, ಅಂತ ಅನ್ಸಿದ್ರೆ, ಅದ್ನ ಬರೀತೇನೆ, ನೀನು ಅದ್ನ ಓದುತ್ತಿ...ಆವಾಗ, ನಿನ್ನನ್ನ ನೀನೆ ಅಲ್ಲಿ ಕಾಣ್ಬೇಯ ಆದಿರಲಿ, ನಾವಿಬ್ರೂ ಮಾತಾಡ್ತಾ ಕೂತ್ರೆ ಕಥೆ ಮುಂದುವರ ಯುವುದು ಹೇಗೆ, ಆದ್ರಿಂದ ಪುನಃ ಶ್ರೀ ಶ್ರೀ ಸೋಮಪ್ಪನವರ ಬಳಿ ಹೋಗಿ ನೋಡೋಣ! ನಡೆ!

ಚುನಾವಣೆಗೆ ಕೇವಲ ಒಂದೇ ವಾರ... ವಿಭಿನ್ನ ರಾಜಕೀಯ ಪಕ್ಷಗಳ ಮುಖಂಡರುಗಳಿಗಂತೂ ಅಂಡು ತೂರಿಸಿಕೊಳ್ಳಲೂ ಪುರುಸೊತ್ತಿಲ್ಲ... ಆರಾಮವಾಗಿ ಇರುವವರೆಂದರೆ ಕೇವಲ ಮಾನ್ಯ ಸೋಮಪ್ಪನವರು ಮತ್ತು ಅವರ ಪಕ್ಷದ ಅಭ್ಯರ್ಥಿಗಳು ಮಾತ್ರ... ಭಾಷಣಗಳಿಲ್ಲ, ಧ್ವನಿವರ್ಧಕಗಳ ಅರಚಾಟವಿಲ್ಲ ಅಷ್ಟೇ ಏಕೆ? ಕಾರು, ಬೈಕುಗಳ ಓಡಾಟವೂ ಇಲ್ಲ..

ಅಸಮಾನ್ಯಪುರದಲ್ಲಿ ಇದ್ದದ್ದು ಒಟ್ಟು ಒಂದುನೂರಾ ಹದಿನೆಂಟು ಕ್ಷೇತ್ರಗಳು ಈ ಎಲ್ಲಾ ಕ್ಷೇತ್ರಗಳಿಗೂ ಸ್ವತಃ ನಮ್ಮ ಮಾನ್ಯ ಸೋಮಪ್ಪನವರೆ ಹಣ ಕೊಟ್ಟು ಅಭ್ಯರ್ಥಿಗಳನ್ನ ನಿಲ್ಲಿಸಿದ್ದರು... ಇವರ ಪಾರ್ಟಿಯಲ್ಲಿ ಪ್ರವೇಶ ಆಗೋದಿಕ್ಕೆ ಇದ್ದದ್ದು ಒಂದೇ ಮಾರ್ಗ ಶ್ರೀ ಶ್ರೀ ಸೋಮಪ್ಪದವರು ಹೇಳಿದ ಹಾಗೆ ಕೇಳಿಕೊಂಡಿರಬೇಕು... ಯಾವುದನ್ನೂ ಪ್ರಶ್ನೆ ಮಾಡಕೂಡದು...ಚುನಾವಣೆಗೆ ಇಷ್ಟು ಹತ್ತಿರ ಇದ್ರೂ ಇವ್ರ ಕ್ಯಾಂಪಿನಲ್ಲಿ ಏನೂ ಚಟುವಟಿಕೆ ಇಲ್ಲ. ಬೇರೆಯವರಿಗೆ ಇರ್ಲಿ, ಸ್ವತಃ ಪಾರ್ಟಿ ಅಭ್ಯರ್ಥಿಗಳ್ಗೇ ಭಯ ಶುರುವಾಯ್ತು.. ಅವ್ರ ಎಲ್ಲ ಪ್ರಶ್ನೆಗಳಿಗೂ ಮಾನ್ಯ ಸೋಮಪ್ಪನವರ ಉತ್ತರ ಒಂದೇ "ಯಾವುದರ ಬಗ್ಗೆನೂ ತಲೆ ಕೆಡಿಸಿಕೊಳ್ಳದೆ, ಆರಾಮವಾಗಿ ಮನೇಲಿ ಊಟ, ನಿದ್ದೆ, ಮಾಡ್ಕೊಂಡಿರಿ" ಅಂತ. ಯಾರೂ ಭಾಷಣ ಮಾಡೋ ಹಾಗೂ ಇಲ್ಲ... ಅಷ್ಟೇ ಏಕೆ? ಚುನಾವಣಾ ಪ್ರಣಾಳಿಕೆಯೂ ಇಲ್ಲ ಚುನಾವಣೆ ದಿನವೂ ಬಂತು, ಅಂದು ಬೆಳಗ್ಗೆ ನಾಲ್ಕು ಗಂಟೆಗೇ ಮಾನ್ಯ ಸೋಮಪ್ಪನವರು ಎದ್ರು ... ಹಾಗೇ ಉಂಗುರ ಸವರಿದರು...ಭೂತ ಪ್ರತ್ಯಕ್ಷವಾಯ್ತು...

"ಏನಪ್ಪಣೆ? ನಾನು ಉಂಗುರದ ಗುಲಾಮ"

"ಇವತ್ತು ಚುನಾವಣೆ ನಡೀತದೆ! ನೆನಪಿದ್ಯಾ?"

ಗತ್ತಿನಿಂದ ಸೋಮಪ್ಪನವರು ಪ್ರಶ್ನಿಸಿದರು.

"ನೆನಪಿದೆ"

ಭೂತ ವಿನೀತವಾಗಿ ನುಡೀತು...

"ಈ ಚುನಾವಣೇಲಿ ನನ್ನ ಪಾರ್ಟಿ ಬಿಟ್ಟು ಬೇರೆ ಯಾವ ಪಾರ್ಟಿಗೂ ಒಂದೇ ಒಂದು ಓಟು ಬರಬಾರದು. ನೂರಕ್ಕೆ ನೂರು ಮತದಾನ ಆಗ್ಬೇಕು"

"ಅಪ್ಪಣೆ"

ಅಷ್ಟು ಹೇಳಿದ ಭೂತ ಮರುಕ್ಷಣದಲ್ಲಿ ಮಾಯಾ ಆಯ್ತು.

ಮುಂದೆ ಚುನಾವಣಾ ಫಲಿತಾಂಶ ಏನಾಯ್ತು ಅನ್ನೋದನ್ನ ನೀನೀಗಾಗ್ಲೆ ಊಹಿಸಿರುವೆಯಲ್ಲವೆ ಓದುಗ! ಹೌದು. ನಿನ್ನ ನಿರೀಕ್ಷೆಗೆ ತಕ್ಕಂತೆ, ಈ ಪ್ರಪಂಚ ಹಿಂದೆಂದೂ ಕಂಡೂ ಅರಿಯದ, ಕೇಳಿಯೂ ತಿಳಿಯದ, ಪವಾಡ ಅಸಮಾನ್ಯಪುರದ ಚುನಾವಣೆಯಲ್ಲಿ ನಡೆಯಿತು. ವಿರೋಧಿಗಳಿಗೆ ಬೇರೆಯವರ ಓಟಿರಲಿ, ಸ್ವತಃ ತಮ್ಮದೇ ಓಟೂ ಲಭ್ಯ ಆಗಲಿಲ್ಲ... ಯಾವುದೊ ಮೋಡಿಗೆ ಒಳಗಾದವರಂತೆ ಜನ ತಂಡ ತಂಡವಾಗಿ ಬಂದ್ರು ಶ್ರೀ ಶ್ರೀ ಸೋಮಪ್ಪನವರ 'ಭಿಕ್ಷಾ ಪಾತ್ರೆ' ಚಿಹ್ನೆಗೆ ಮತ ಹಾಕಿದ್ರು.... ಕೈಲಾಗದ ಮುದುಕರು, ರೋಗಗ್ರಸ್ತ ಮುದುಕಿಯರೂ ಓಟು ಮಾಡ್ಲಿಕ್ಕೆ ತಂಡ ತಂಡವಾಗಿ ಬಂದ್ರು. 'ಭಿಕ್ಷಾ ಪಾತ್ರೆ'ಗೆ ಮತ ಒತ್ತಿದರು,, ಚುನಾವಣಾ ಫಲಿತಾಂಶ ಕೇಳಿದ ಪ್ರಪಂಚವೆ ನಿಬ್ಬೆರಗಾಗಿ ಹೋಯ್ತು, ಚುನಾವಣೆಯಲ್ಲಿ ಗೆಲ್ಲುವುದಿರಲಿ, ಇಡಿಗಂಟಿನ ಆಸೆ ಕೂಡಾ ಬಿಟ್ಟಿದ್ದ 'ಬಡವರ ಪಕ್ಷ'ದ ಅಭ್ಯರ್ಥಿಗಳಲ್ಲಿ ಒಂದಿಬ್ಬರು ಸಂತೋಷದ ಅತಿರೇಕದಿಂದ ಈ ಪ್ರಪಂಚವನ್ನೇ ಬಿಟ್ಟು ಹೊರಟು ಹೋದರು...ಮತ್ತೇನು? ಕೆಲವೇ ದಿನಗಳ ಹಿಂದೆ ಅನಾಮಧೇಯ ಸೋಮ್ಯಾ ಆಗಿದ್ದ ಶ್ರೀ ಶ್ರೀ ಸೋಮಪ್ಪನವರು ಈಗ ಪ್ರಧಾನಮಂತ್ರಿ ಸೋಮಪ್ಪನವರಾಗಿ ಮಾರ್ಪಾಡಾಗಿ ಬಿಟ್ಟರು,

ಶ್ರೀ ಶ್ರೀ ಸೋಮಪ್ಪನವರು ಹಾಗೂ ಅವರ ಬಡವರ ಪಾರ್ಟಿ ಸದಸ್ಯರು ಒಬ್ಬೊಬ್ಬರಾಗಿ ಅವಿರೋಧವಾಗಿ ಆಯ್ಕೆ ಆದ ಸುದ್ದಿ ಅಸಮಾನ್ಯ

ಪುರದ ಅಶರೀರವಾಣಿ ಮೂಲಕ ಹರಡುತ್ತಿದ್ದಂತೆಯೇ, ಎಲ್ಲ ವಿರೋಧ ಹಾಗೂ ಆಳುವ ಪಕ್ಷದ ನಾಯಕಮಣಿಗಳು ಭೂಗರ್ಭವನ್ನ ಹೊಕ್ಕು ಮಾಯವಾದರು..ಪತ್ರಿಕಾ ಪ್ರತಿನಿಧಿಗಳ ಹಿಂಡೇ ಶ್ರೀ ಶ್ರೀ ಸೋಮಪ್ಪನವರ ಮನೆ ಮುಂದೆ ಗುಂಪಾಗಿ ನೆರೆಯತೊಡಗಿತು.. ಫಲಿತಾಂಶ ಬಿತ್ತರವಾಗುತ್ತಲೆ, ಅಭಿಮಾನಿಗಳ ಮಹಾಪೂರ ನಮ್ಮ ಕಥಾನಾಯಕರ ಮನೆಯತ್ತ ಹೊರಟಿತು...ಹಿಂದಿನ ದಿನದ ತನಕವೂ ವಿಭಿನ್ನ ಪಕ್ಷಗಳಲ್ಲಿದ್ದ ಮರಿ-ಕಿರಿ ಪುಡಾರಿಗಳೆಲ್ಲ ಪವಾಡ ಎಂಬಂತೆ ಬಡಪರ ಪಕ್ಷದ ಅಭಿಮಾನಿಗಳಾಗಿ ಪರಿವರ್ತಿತವಾಗಿ ಬಿಟ್ಟರು. ಗೆದ್ದ ಎತ್ತಿನ ಕೊರಳು ಸಿಗದಿದ್ದರೆ ಕಡೆಗೆ ಬಾಲವಾದರೂ ಹಿಡಿಯುವವರು ನಾವಲ್ಲವೆ? ನೋಡ ನೋಡುತ್ತಲೆ ಶ್ರೀ ಶ್ರೀ ಸೋಮಪ್ಪನವರು ರಾಜಕೀಯ ಧ್ರುವತಾರೆಯಾದರು. ಇದೊ ಇಲ್ಲಿ ನೋಡಿ ಓದುಗ, ಶ್ರೀ ಶ್ರೀ ಸೋಮಪ್ಪನವರು ತಮ್ಮ ಅಭಿಮಾನಿಗಳತ್ತ ಕೈ ಬೀಸುತ್ತಿದ್ದಾರೆ. ಕರಿಯನ ನೇತೃತ್ವದಲ್ಲಿ ಒಂದು ತಂಡ ಈಗಾಗಲೆ ಅವರನ್ನ ಸುತ್ತುವರೆದು, ಜೈಕಾರ ಹಾಕುತ್ತಿದೆ. ಅಂದು ಬೆಂದೂರಿನ ಜನತೆಗಂತೂ ಹೇಳತೀರದ ಸಂತೋಷ. ಬೆಂದೂರಿನ ಕಂದ ಇಂದು ಅಸಮಾನ್ಯಪುರದ ಪ್ರಧಾನಿ ಆದದ್ದು ಕಡಿಮೆ ಪವಾಡವೆ? ನೂರಾರು ಕ್ಯಾಮರಾಗಳು ಶ್ರೀ ಶ್ರೀ ಸೋಮಪ್ಪನವರತ್ತ ಕೇಂದ್ರೀಕರಿಸಿವೆ. ಅವರು ನಿಂತದ್ದು, ಕೂತದ್ದು, ನಡೆದದ್ದು, ಮುಗುಳ್ನಕ್ಕದ್ದು, ಗಡಿಗೆ ಮುಖ ಮಾಡಿದ್ದು, ಕಡೆಗೆ ತಿಕ ಕೆರೆದುಕೊಂಡದ್ದು ಎಲ್ಲ ಭಾವಗಳ. ಎಲ್ಲ ಭಂಗಿಗಳ ಫೋಟೋಗಳನ್ನ ತೆಗೆಯುವಲ್ಲಿ ನಿರತವಾಗಿವೆ...ಪತ್ರಿಕಾ ಪ್ರತಿನಿಧಿಗಳ ಬೇಡಿಕೆಯನ್ನ ಕಡೆಗೂ ದೊಡ್ಡ ಮನಸ್ಸಿನಿಂದ ಮನ್ನಿಸಿದ ಮಾನ್ಯ ಸೋಮಪ್ಪನವರು ಪತ್ರಿಕಾ ಸಂದರ್ಶನಕ್ಕೆ ಸಿದ್ಧವಾದರು..ತಮ್ಮ ಜಾರುತ್ತಿದ್ದ ಕನ್ನಡಕವನ್ನ ಸರಿಪಡಿಸಿಕೊಳ್ಳುತ್ತಾ ಒಬ್ಬ ಪ್ರತಿನಿಧಿ ಪ್ರಶ್ನಿಸಿದ.

“ಮಾನ್ಯರೆ, ತಮ್ಮ ಹಾಗೂ ತಮ್ಮ ಪಕ್ಷದ ಈ ಅದ್ಭುತ ವಿಜಯವನ್ನ ತಾವು ನಿರೀಕ್ಷಿಸಿದ್ದಿರೆ?”

ಶ್ರೀ ಶ್ರೀ ಸೋಮಪ್ಪನವರು ಮಾತಾಡಲಿಲ್ಲ. ಮುಗುಳ್ನಗೆ ಬೀರುತ್ತಾ ಸುಮ್ಮನೆ ಕೂತಿದ್ದರು, ಅವರ ಬೆರಳುಗಳು ಉಂಗುರದೊಡನೆ

ಆಟ ಆಡ್ತಿತ್ತು... ಮುಖದಲ್ಲಿ ಎಂದಿನ ಮುಗುಳ್ನಗೆ. ಮತ್ತೊಬ್ಬ ಪ್ರತಿನಿಧಿ ಪ್ರಶ್ನಿಸಿದ,

"ತಾವು ಎಂದು ಮಂತ್ರಿಮಂಡಲ ರಚಿಸುವ ಉದ್ದೇಶ ಹೊಂದಿದ್ದೀರಿ?

"ಇವತ್ತೇ"

ಶ್ರೀ ಮದ್ಗಾಂಭೀರ್ಯದಿಂದ ಶ್ರೀ ಶ್ರೀ ಸೋಮಪ್ಪನವರು ಹೇಳಿದರು. ಮತ್ತೊಬ್ಬ ಪ್ರತಿನಿಧಿ ಆತುರದಿಂದ ಕೇಳಿದ.

"ಅದರ ವಿವರಗಳನ್ನು ನೀಡಬಹುದೆ?"

"ಧಾರಾಳವಾಗಿ"

ಮಾನ್ಯ ಸೋಮಪ್ಪನವರ ಕೈ ಅವರ ಜೇಬಿನ ಬಳಿಗೆ ಹೋಯ್ತು... ಹೊರಬಂದ ಕೈಯೊಡನೆ ಒಂದು ದೊಡ್ಡ ಮಡಿಸಿದ ಹಾಳೆ ಇತ್ತು...

ಎಲ್ಲ ಪತ್ರಿಕಾ ಪ್ರತಿನಿಧಿಗಳು ತೀವ್ರ ಚಟುವಟಿಕೆಯಿಂದ ಪೆನ್ನು, ಕಾಗದಗಳೊಡನೆ ಸಿದ್ಧವಾದರು...ಶ್ರೀ ಶ್ರೀ ಸೋಮಪ್ಪನವರು ಒಂದು ಕ್ಷಣತಡೆದು ಸುತ್ತಲೂ ನೋಡಿದರು...ಎಲ್ಲ ಪ್ರತಿನಿಧಿಗಳೂ ಕಾತರದಿಂದ ಕುಳಿತ್ತಿದ್ದರು....ನಿಮಿರಿದ ಕಿವಿಗಳು, ಕ್ಯಾಪ್ ತೆರೆದು ಬರೆಯಲು ಸಿದ್ಧವಾದ ಪೆನ್ನುಗಳು...ಮುಂದಿದ್ದ ಪ್ರತಿನಿಧಿ ಒಬ್ಬನನ್ನು ಬೆರಳಿನಿಂದ ಸನ್ನೆ ಮಾಡಿದ ತಕ್ಷಣವೇ, ಆ ಪ್ರತಿನಿಧಿ ಸಂತೋಷದಿಂದ ಉಬ್ಬಿ ಮುಂದಿನ ಹುಳುಕು ಹಲ್ಲುಗಳನ್ನು ಪ್ರದರ್ಶಿಸಿ, ಧನ್ಯತಾ ಭಾವದಿಂದ, ತಕ್ಷಣವೆ ಶ್ರೀ ಶ್ರೀ ಸೋಮಪ್ಪನವರ ಬಳಿ ಓಡಿದ...ಆ ಪ್ರತಿನಿಧಿಯು ಕೈಗೆ ಪಟ್ಟಿಕೊಡುತ್ತಾ ಅದನ್ನು ಸಭೆಗೆ ಓದಲು ಸೂಚಿಸಿದ ಶ್ರೀ ಶ್ರೀ ಸೋಮಪ್ಪನವರು ಆರಾಮ ಕುರ್ಚಿಯಲ್ಲಿ ಕುಳಿತರು ಕಾಲುಗಳನ್ನು ಅಗಲವಾಗಿ ಚಾಚಿ, ಕುರ್ಚಿ ಬೆನ್ನಿಗೆ ಒರಗಿಕೊಂಡು, ತಲೆ ಎತ್ತಿ ಸೂರು ನೋಡುತ್ತಾ, 555 ಬ್ರ್ಯಾಂಡಿನ ಸಿಗರೇ

ಚಿಸಲ್ಲಿ ವರ್ತುಲ ಹೊಗೆ ಬಿಡುತ್ತಾ, ತಪಸ್ಸಿನ ಭಂಗಿಯಲ್ಲಿ...! ಪ್ರತಿನಿಧಿ ಓದಲು ಶುರು ಮಾಡಿದ..

| | | |
|---|---|---|
| ಪ್ರಧಾನ ಮಂತ್ರಿಗಳು | : | ಶ್ರೀ ಶ್ರೀ ಸೋಮಪ್ಪನವರು |
| ರಕ್ಷಣಾ ಮಂತ್ರಿಗಳು | : | ಶ್ರೀ ಶ್ರೀ ಸೋಮಪ್ಪನವರು |
| ಅರ್ಥ ಮಂತ್ರಿಗಳು | : | ಶ್ರೀ ಶ್ರೀ ಸೋಮಪ್ಪನವರು |
| ಕೈಗಾರಿಕಾ ಮಂತ್ರಿಗಳು | : | ಶ್ರೀ ಶ್ರೀ ಸೋಮಪ್ಪನವರು |
| ವಿದೇಶಾಂಗ ಮಂತ್ರಿಗಳು | : | ಶ್ರೀ ಶ್ರೀ ಸೋಮಪ್ಪನವರು |
| ಕಾನೂನು ಮಂತ್ರಿಗಳು | : | ಶ್ರೀ ಶ್ರೀ ಸೋಮಪ್ಪನವರು |
| ---------------------- | | ---------------------- |
| ---------------------- | | ---------------------- |
| ---------------------- | | ---------------------- |

ಪಟ್ಟಿ ಬೆಳೆಯುತ್ತಲೆ ಹೋಯ್ತು...ಸುಮಾರು ನಲ್ವತ್ತೈದಕ್ಕಿಂತಲೂ ಹೆಚ್ಚು ಖಾತೆಗಳು.. ಎಲ್ಲ ಖಾತೆಗಳ ಮಂತ್ರಿಗಳೂ ಶ್ರೀ ಶ್ರೀ ಸೋಮಪ್ಪನವರೆ, ಸೂಜಿ ಬಿದ್ದರೂ ಕೇಳುವ ನಿಶ್ಶಬ್ದತೆ. ಉಸಿರಾಟವೆ ಕೇಳಿಸುವ ಮೌನ. ಮೌನದ ಬಸಿರಿನಿಂದ ಮತ್ತೂ ಮೌನ... ಕ್ಷಣಗಳು ಕಳೆಯುತ್ತಿದ್ದವು... ನಿಮಿಷಗಳು ಉರುಳುತ್ತಿದ್ದವು...ಶ್ರೀಶ್ರೀ ಸೋಮಪ್ಪನವರು ಮಾತ್ರ ಅದೇ ಸಮಾಧಿ ಸ್ಥಿತಿಯಲ್ಲಿಯೇ. ಕಡೆಗೊಬ್ಬ ಪ್ರತಿನಿಧಿ ಧೈರ್ಯ ಮಾಡಿ ಕೇಳಿದ,

"ಮಾನ್ಯರೆ, ತಾವು ಪತ್ರಿಕೆಗಳೊಂದಿಗೆ ಸಹಕಾರ ನೀಡುತ್ತಿಲ್ಲ— ಈ ಸ್ಥಿತಿಯಲ್ಲಿ ನಾವು ಏನು ಮಾಡಬೇಕು?"

ಎಲ್ಲ ಪತ್ರಿಕಾ ಪ್ರತಿನಿಧಿಗಳ ಪ್ರತಿನಿಧಿಯಾಗಿ ಈ ಮಾತನ್ನ ಆಡಿದ., ಶ್ರೀ ಶ್ರೀ ಸೋಮಪ್ಪನವರು ಒಮ್ಮೆ ಎಲ್ಲರ ಮುಖವನ್ನು ನೋಡಿದರು... ಆ ಪ್ರತಿಕ್ರಿಯೆ ಕೇವಲ ಅವನೊಬ್ಬನ ಪ್ರತಿಕ್ರಿಯೆ ಮಾತ್ರವೇ ಆಗಿರದೆ, ಎಲ್ಲರ ಪ್ರತಿಕ್ರಿಯೆಯೂ ಆಗಿದೆ ಎಂದೆನ್ನಿಸಿತವರಿಗೆ,

"ಎಲ್ಲರೂ ಹೋಗಿ ನಮ್ಮೂರ ಕೆರೆಯಲ್ಲಿ ಬೀಳಿ" ನಿರ್ಭಾವುಕರಾಗಿ ಹೇಳಿದ ಶ್ರೀ ಶ್ರೀ ಸೋಮಪ್ಪನವರತ್ತ ಚಕಿತರಾಗಿ ಪ್ರತಿನಿಧಿಗಳು ನೋಡ ನೋಡುತ್ತಿದ್ದಂತೆಯೇ ಅವರತ್ತ ಬೆನ್ನಾಗಿ ಶ್ರೀ ಶ್ರೀ ಸೋಮಪ್ಪನವರು ಮನೆ ಒಳಗೆ ನಡೆದರು....

ಶ್ರೀ ಶ್ರೀ ಸೋಮಪ್ಪನವರು ಪ್ರಧಾನಿಗಳಾದದ್ದು ಅಸಮಾನ್ಯಪುರದ ಸೌಭಾಗ್ಯವೆಂದೆ ಹೇಳಬೇಕು—ಯಾಕಂದ್ರೆ, ಭೂತದ ಸಹಾಯ ಇರೋ ತನಕ ಅವರನ್ನ ಎದುರಿಸುವವರು ಯಾರು? ಶ್ರೀ ಶ್ರೀ ಸೋಮಪ್ಪನವರು ಅಧಿಕಾರ ಸ್ವೀಕರಿಸಿದ ಮರುದಿನವೆ ದೇಶದಾದ್ಯಂತ ಅರೆ ಕಟ್ಟಡಗಳು ಪೂರ್ಣಗೊಂಡವು... ಯೋಚಿಸಿ, ಪ್ರಾರಂಭಿಕ ಹಂತದಲ್ಲಿದ್ದ ಕಾಲುವೆ, ನೀರಾವರಿ ಯೋಜನೆಗಳು ಮಾಂತ್ರಿಕ ಮಾಯಾದಂಡಸ್ಪರ್ಶ ಎಂಬಂತೆ ಪೂರ್ಣವಾದವು...ಮನೆ ಇಲ್ಲದವರಿಗೆ ಭವ್ಯ ಸೌಧಗಳು ನಿರ್ಮಾಣ ಆದುವು. ಹೆಚ್ಚೇನು ಹೇಳಲಿ ಓದುಗ! ಯಾವುದೆ ಬಯಕೆ ತಮ್ಮ ಪ್ರಜೆಗಳಿಂದ ಬರಲಿ, ಮರುದಿನವೆ ಪವಾಡಸದೃಶ ರೀತಿಯಲ್ಲಿ ಅವರ ಆ ಬಯಕೆಗಳು ಸಂಪೂರ್ಣ ಆದುವು...ಹೇಳಿದನ್ನ ಕೊಡಲು ಶ್ರೀ ಶ್ರೀ ಸೋಮಪ್ಪನವರಿದ್ದಾರೆ—ಬೇಕಿದ್ದನ್ನ ಕೇಳಲು ಅಸಮಾನ್ಯಪುರದ ಜನರಿದ್ದಾರೆ...ಕೊಡುವ ಕೈ ಇದ್ದಾಗ, ಬೇಡುವ ಬಾಯಿಗೆ ದಣಿವಿಲ್ಲ...ಲಕ್ಷಾಂತರ ಜನ.. ಕೋಟ್ಯಾಂತರ ಬಯಕೆಗಳು, ಬೇಕಿದ್ದನ್ನ ಕೇಳಿದರು...ಕಡೆಗೆ ಬೇಡದ್ದನ್ನೂ ಸಹಾ...ಭೂತಕ್ಕೂ ಸಂತೋಷವೆ... ಸಾವಿರಾರು ವರ್ಷಗಳಿಂದ ನಿದ್ದೆ ಮಾಡಿ ಮಾಡಿ ಮಾಡಿ ಮಾಡಿ ಅದಕ್ಕೆ ಜಡತ್ವ ಬಂದಿತ್ತು. ಆದರೀಗ ಅದಕ್ಕೆ ಅಂಡು ತುರಿಸಿಕೊಳ್ಳಲೂ ಪುರುಸೊತ್ತು ಇಲ್ಲ—

ಇಷ್ಟೆಲ್ಲದರ ನಡುವೆ, ಶ್ರೀ ಶ್ರೀ ಸೋಮಪ್ಪನವರ ಕುರಿತಾಗಿ ಪ್ರಜೆಗಳು ಏನು ಯೋಚಿಸುತ್ತಿರಬೇಕು? ಹೌದು! ಮಾನ್ಯ ಸೋಮಪ್ಪನವರೀಗ ದೇವರು ಸಾಕ್ಷಾತ್ ದೇವರು... ಶ್ರೀಮನ್ನಾರಾಯಣನ ಹನ್ನೊಂದನೇ

ಅವತಾರ. ಆ ಕಲ್ಲಿನ ದೇವರು ನಮಗೇನು ಕೊಡಬಲ್ಲ..? ಬೇಡಿದ್ದನ್ನ ಕ್ಷಣಾರ್ಧದಲ್ಲಿ ನೀಡಬಲ್ಲ ಶ್ರೀ ಶ್ರೀ ಸೋಮಪ್ಪನವರಿರುವಾಗ. ಹಾಗಾಗಿ ಮೊದಮೊದಲು ದೇವರ ಅಂಶವಾಗಿದ್ದ ನಮ್ಮ ನಾಯಕರು, ಜನಗಳ ದೃಷ್ಟಿಯಲ್ಲಿ ಕಡೆಗೆ ದೇವರ ಆದರು. ದೇಶದ ಉದ್ದಗಲಕ್ಕೂ ಅಸಂಖ್ಯಾತ ಹೊಸ ದೇವಸ್ಥಾನಗಳು ಭರದಿಂದ ನಿರ್ಮಾಣವಾದವು...ಮುಗುಳ್ನಗೆಯೊಡಗೂಡಿ ಆಶೀರ್ವದಿಸುತ್ತಿರುವ ಮಾನ್ಯ ಸೋಮಪ್ಪನವರ ವಿಗ್ರಹಗಳು ಗರ್ಭಗುಡಿಯಲ್ಲಿ ವೇದಮಂತ್ರ ಘೋಷಗಳೊಡನೆ ವಿಧಿವತ್ತಾಗಿ ಪ್ರತಿಷ್ಠಾಪಿಸಲ್ಪಟ್ಟವು.

ಮಾನ್ಯ ಸೋಮಪ್ಪನವರು ತಮ್ಮ ಕೋಣೆಯಲ್ಲಿನ ಆರಾಮಾಸನದಲ್ಲಿ ಮಂಡಿಸಿದ್ದಾರೆ...ಕೈಯಲ್ಲಿ 555 ಸಿಗರೇಟು ಹೊಗೆ ಕಾರ್ತಾ ಇದೆ..ದೃಷ್ಟಿ ಸೂರಿನತ್ತ..ಬೆರಳು ಸುಟ್ಟಂಗಾತು... ಥತ್, ಇದರವ್ವನಾ! ಅಂದ್ಕಂಡ್, ಅದನ್ ಎಸೆದು ಮತ್ತೊಂದು ಸಿಗರೇಟ್ ಹಚ್ಚಿದ್ರು, ಅದೂ ಆಯ್ತು, ಇನ್ನೊಂದು...ಅವ್ರ ತಲೇಲಿ ಗುಯ್ರ್ ಗುಟ್ತಿರೋದು ಏನು? ಬಹುಶಃ ಅದು ಅವ್ರಿಗೂ ಗೊತ್ತಿಲ್ವೇನೊ? ಒಮ್ಮೆ ಕೂತಲ್ಲೇ ತಿಕಾ ಕೆರಕಂಡ್ರು... ಮತ್ತೆ ಮಾಮೂಲಿ ತಪಸ್ಸಿನ ಭಂಗಿಯಲಿ ಕೂತ್ರು...ಅಪರೂಪಕ್ಕೊಮ್ಮೆ ಸಿಗರೇಟ್ ಬಾಯ್ ಬಳಿ... ಮತ್ತೇನೂ ಇಲ್ಲ... ಕೆಲವಾರು ನಿಮಿಷ ಹಾಗೇ ಕಳೀತು... ಇದ್ದಕ್ಕಿದ್ದಂತೆ ಶ್ರೀ ಶ್ರೀ ಸೋಮಪ್ಪನವರು ದಿಗ್ಗನೆ ಎದ್ದು ಕೂತರು..ಸರಿಯಾಗಿ ನೆಟ್ಟಗೆ ಆದ್ರು... ಕಣ್ಣು ಉಜ್ಕೊಂಡ್ ನೋಡಿದ್ರು... ಯಾವುದೊ ವಸ್ತು... ಅದೆಲ್ಲಿಂದಾನೊ ತೇಲ್ಕಂಡ್ ತೇಲ್ಕಂಡ್ ಬಂದಂಗಾತು... ಶ್ರೀ ಶ್ರೀ ಸೋಮಪ್ಪನವರು ನೋಡ್ತಾಲೇ ಇದ್ರು....ಅದು ಹತ್ತಿರ ಬಂದಂಗಾತು. ಇನ್ನೂ ಹತ್ತಿರ ಬಾದ್ ಬಿಡ್ತು... ಈಗೀಗ ಅದರ ಆಕಾರ ಸ್ಪಷ್ಟ ಆಗಲು ಶುರುವಾಯ್ತು... ಯಾವುದೊ ಚಟ್ಲಿ ಇದ್ದಂಗದೆ ಅಂತ ಕಣ್ಣರಳಿಸಿ ನೋಡಿದ್ರು.. ನೋಡ್ತಾ ಇದ್ರು...ಹೌದು ಜಿರಳೆ ಚಟ್ಲಿ. ಎಲ್ಲೋ ನೋಡ್ದಂಗದೆ ಅಂತ ತಲೆ

ಕಿರಚಂಡ್ರು.. ಮಸುಕು ಮಸುಕಿನ ನೆನಪುಗಳು.... ಆ ಚಪ್ಪಲಿಗಳಾದರೂ, ಇವ್ರನ್ನ ಸುತ್ತಾಕ್ತಾ ಅವೆ... ಥಟ್ಟನೆ ಅವ್ರಿಗ್ ನೆನಪಿಗ್ ಬಂತು....ಹ್ಞಾ! ಗೌಡನ್ ಚಪ್ಲಿ. ಆ ನನ್ಮಗ ಗೌಡ ಸತ್ರೂ ಅವ್ನ ಚಪ್ಲಿ ಸಾಯ್ಲಿಲ್ಲ.... ಅವ್ರು ಕಣ್ಣು ಅಪ್ರಯತ್ನವಾಗಿ ಉಂಗುರವನ್ನೊಮ್ಮೆ ನೋಡಿತು— ಆ ಉಂಗುರದ ನಡುವೆ ಗೌಡ್ನ ಮುಖ ಕಂಡಂಗಾತು... ಕೆಂಪ್ಗಿನ್ ಕಣ್ಣು, ಹುರಿಗಟ್ಟಿದ್ ಮೀಸೆ, ದಪ್ಪ ತುಟಿಗಳು, ಕ್ರೂರವಾದ ಹುಳುಕು ಹಲ್ಲುಗಳು ಅಗಲವಾದ ಬಾಯಿ, ಚೂಪುಗದ್ದ - ಯಾವ್ದೋ ಸಿನಿಮಾದಲ್ ನೋಡಿದ್ ಹುಲಿಮುಖ ನೆನಪಿಗ್ ಬಂತು... ತಲೆ ಎತ್ತಿ ಸೂರ್ ನೋಡ್ತಾ ಕುತ್ಕಂಡ್ರು ನೋಡ್ತಾ ನೋಡ್ತಾ ಇದ್ದಂಗೆ, ಅವ್ರು ಬಂಗ್ಲೆ ಮಾಯಾ ಆಯ್ತು... ಅದೇ ಸೋಮ್ಯಾನ ಗುಡ್ಲು.... ನಡುರಾತ್ರಿ. ಸೋಮ್ಯಾ ಗುಡ್ಲ ಹೊರ್ಗ ಮಲಗವ್ನೆ.. ಗುಡ್ಲ ಬಾಕ್ಲ ಹಾಕದೆ... ಬಾಕ್ಲ ಹೊರ್ಗ ಚಪ್ಲಿ... ಆ ಗೌಡಾ ನನ್ಮಗಂದೆ...ಒಳಗೆ ದೀಪ ಮಿಣುಕ್ ಮಿಣುಕ್ ಅಂತಿದೆ— ಕ್ಷಣವಾದ ಬೆಳಕು... ತೀವ್ರ ಉಸಿರಾಟದ ಸದ್ದು... ಸುಖದ ನರಳುವಿಕೆ, ಬಳೆಗಳ ಧ್ವನಿ, ಕಿಲ ಕಿಲ ನಗು. ಶ್ರೀ ಶ್ರೀ ಸೋಮಪ್ಪನವರೀಗ ಅದನ್ನ ಆಸಕ್ತಿಯಿಂದ ನೋಡತೊಡಗಿದರು... ಭಲಾ ಗೌಡಾ! ಗಂಡೂಂದ್ರೆ ನೀನೆ ಸೈ. ನಿನ್ಕಾಲದಲ್ಲಿ ಹಳ್ಳೀಲಿದ್ ಎಲ್ಲಾ ಭೂಮೀನೂ ನಿಂದೆ... ಎಲ್ ನೋಡಿದ್ರೂ ನೀನ್ ಬೀಜ ಬಿತ್ತಿದ್ ಹೊಲಾನೆ. ಮಾನ್ಯ ಸೋಮಪ್ಪನವರು ನೋಡ್ತಾನೆ ಇದ್ರು... ಅಲ್ಲಿ ಆ ಸೋಮ್ಯಾ ಅವಡುಗಚ್ತಾನೆ... ಮುಷ್ಟಿ ಬಿಗಿ ಮಾಡ್ತಾನೆ. ಥೂ! ಅಂತ ಕ್ಯಾಕರಿಸಿ ಉಗೀತಾನೆ.. ಕಡೆಗೆ ಹಾಗೇ ತಿಕಾ ಬಾಯಿ ಮುಚ್ಕಂಡ್ ಮಲಗ್ತಾನೆ.. ಕೊಂಚ ಹೊತ್ನಲ್ಲೇ ಗೊರಕೆ ಶಬ್ದ... ಕಡೆಗೆ ಏನೂ ಇಲ್ಲ.

ಶ್ರೀ ಶ್ರೀ ಸೋಮಪ್ಪನವರು ಕನಸಿನಿಂದ ಎಚ್ಚೆತ್ತರು... ಮುಖದಲ್ಲಿ ಕಂಡೂ ಕಾಣದ ಮುಗುಳ್ನಗೆ... ಬೆರಳುಗಳು ಉಂಗ್ರ ಸವರಿತು... ಮರುಕ್ಷಣ ಗುಡುಗು, ಮಿಂಚುಗಳ ನಡುವೆ ಭೂತ ಬಂತು... ಸನ್ನೆ ಮಾಡಿ ಹತ್ರ ಕರದರು— ಕಿವಿಯಲ್ಲಿ ಏನೊ ಹೇಳಿದ್ರು— ಭೂತ ಮಾಯಾ ಆಯ್ತು— ಶ್ರೀ ಶ್ರೀ ಸೋಮಪ್ಪನವರು ಕೋಣೆ ಬಾಗಿಲು ಹಾಕಿಕೊಂಡ್ರು—

ಆ ರಾತ್ರಿಯೆಲ್ಲಾ ಆ ಕೋಣೆಯಲ್ಲಿ ಬಳೆಗಳ ಝಣಝಣತ್ಕಾರ ಕೇಳಿಬರುತ್ತಿತ್ತು— ಅದು ಅದೊಂದೆ ರಾತ್ರಿಯಲ್ಲ— ಮುಂದಿನ ಎಲ್ಲ ರಾತ್ರಿಗಳಲ್ಲೂ ಇದೇ ದೃಶ್ಯದ ಪುನರಾವರ್ತನೆ— ಆದರೆ, ಯಾರೊಬ್ಬ ಹೆಣ್ಣು ಎರಡನೆ ಬಾರಿ ಆ ಕೋಣೆಗೆ ಬಂದುದಿಲ್ಲ, ಅಷ್ಟೆ—

ಸೇಠ್ ಚಂದನ್‌ಲಾಲ್ ಆಸವಾನ್ಯಪುರದ ಅತ್ಯಂತ ದೊಡ್ಡ ಹೆಸರು. ಅವರ ವಜ್ರದ ಅಂಗಡಿಯಲ್ಲಿ ವಿದೇಶೀಯರೂ ವ್ಯವಹಾರ ನಡೆಸುತ್ತಿರುತ್ತಾರೆ— ಸಾಮಾನ್ಯ ಜನ ವರ್ಷದಲ್ಲಿ ದುಡಿಯುವಷ್ಟು ಹಣವನ್ನು ಸೇಠ್ ಒಂದೂ ಗಂಟೆಯಲ್ಲಿ ಗಳಿಸುತ್ತಾರೆ ಎಂಬುದು ಪ್ರಚಲಿತ ಸುದ್ದಿ— ಹತ್ತೂ ಉಂಗುರ ಧರಿಸಿ, ಕುತ್ತಿಗೆಯಲ್ಲಿ ಭರ್ಜರಿ ವಜ್ರದ ಹಾರ ತೊಟ್ಟು ಶ್ರೀ ಮುದ್ಗಾಂಭೀರ್ಯದಿಂದ ಬರುವ ಸೇಠರನ್ನು ನೋಡುವುದೆ ಒಂದು ಅಪೂರ್ವ ದೃಶ್ಯ— ಜನ ಸಾಮಾನ್ಯರಿಗೆ ದೇವರನ್ನಾದರೂ ನೋಡುವುದು ಸುಲಭ, ಆದರೆ ಸೇಠರನ್ನಲ್ಲ— ಅಂತಹಾ ಸೇಠ್ ಬೆಳಿಗ್ಗೆ ಎಂಟು ಗಂಟೆಯಿಂದಲೆ ಶ್ರೀ ಶ್ರೀ ಸೋಮಪ್ಪನವರನ್ನ ನೋಡುವ ಸಲುವಾಗಿ ಕಾದು ಕುಳಿತಿದ್ದರು. ಒಂಭತ್ತಾಯಿತು, ಹತ್ತಾಯಿತು, ಹನ್ನೊಂದು ಗಂಟೆಗೆ ಆಫೀಸ್ ರೂಮಿನ ಬಾಗಿಲು ತೆರೆಯಿತು. . . ಆಕಳಿಸುತ್ತಾ ಹೊರಬಂದಂತಹಾ ಶ್ರೀ ಶ್ರೀ ಸೋಮಪ್ಪನವರು ಸ್ನಾನದ ಮನೆ ಹೊಕ್ಕರು.

ಸರೀ ಹನ್ನೆರಡು ಗಂಟೆಗೆ ಸ್ನಾನದ ಮನೆಯಿಂದ ಹೊರಟ ಶ್ರೀ ಶ್ರೀ ಸೋಮಪ್ಪನವರ ಸವಾರಿ ಅಡಿಗೆ ಮನೆಯತ್ತ...ಸುಮಾರು ಹದಿನೈದು ಮಂದಿ ಒಟ್ಟಿಗೆ ಕುಳಿತುಕೊಳ್ಳಬಹುದಾದಷ್ಟು ದೊಡ್ಡ ಊಟದ ಮೇಜು, ಕ್ಷಮಿಸಿ, ಡೈನಿಂಗ್ ಟೇಬಲ್...ಎಲ್ಲ ತಿಂಡಿಗಳನ್ನೂ ಓರಣವಾಗಿ ಅಲ್ಲಿ ಜೋಡಿಸಲಾಗಿದೆ...ಕುಳಿತುಕೊಳ್ಳುವುದೇ ತಡ, ಏನನ್ನ ತಿನ್ನಬೇಕು, ಎಂದು ಯೋಚಿಸುವಷ್ಟು ವೈವಿಧ್ಯತೆ...ಉಪ್ಪಿಟ್ಟು, ಚಪಾತಿ, ಇಡ್ಲಿ, ರೊಟ್ಟಿ, ವಡೆ, ದೋಸೆ, ಒಡದಕ್ಕಿ ಕಡುಬು, ಕಡೆಗೆ ಅವಲಕ್ಕಿ, ರಾಗಿರೊಟ್ಟಿ ಏನುಂಟು

ಏನಿಲ್ಲ? ಎಲ್ಲರ ಬಾಯಲ್ಲಿ ಜೊಲ್ಲು ತುಂಬುವಷ್ಟು ತಿಂಡಿಗಳು...ಜೊತೆಗೆ ಸಿಹಿ, ವೈವಿಧ್ಯಮಯ ಹಣ್ಣುಗಳು...ಅವುಗಳ ವಿವರವನ್ನು ನೀಡಿ, ಎಲ್ಲರಿಗೂ ಹೊಟ್ಟೆಕಿಚ್ಚು ಉಂಟುಮಾಡುವುದು ನನ್ನ ಉದ್ದೇಶವಲ್ಲ... ಅಲ್ಲಿಯ ವೈವಿಧ್ಯ ನೋಡಿ ನೀನೂ ಬಾಯಿ ಚಪ್ಪರಿಸಬೇಡ....ಓದುಗ! ಅದು ಚಿತ್ರದಂತೆ, ನಾವು ನೋಡಬಹುದು, ಮುಟ್ಟಲಾರೆವು....

ಅಂತೂ ತಿಂಡಿ ಮುಗಿಸಿ (ಅದನ್ನು ಊಟ ಅಂತ ಕರೆದರೂ ತಪ್ಪಿಲ್ಲ) ಥರ್ ಅಂತ ತೇಗುತ್ತಾ ಶ್ರೀ ಶ್ರೀ ಸೋಮಪ್ಪನವರು ಹೊರಬರುವ ಹೊತ್ತಿಗೆ ಗಂಟೆ ಒಂದು ದಾಟಿತ್ತು...ಕಾಯ್ತಾ ಕೂತ ಜನ ಧಡ್ ಅಂತ ಎದ್ರು. . ಸರಿ! ಇನ್ನು ಮುಂದೆ ಶ್ರೀ ಶ್ರೀ ಸೋಮಪ್ಪನವರ ಧರ್ಮದರ್ಶನ ಕಾರ್ಯಕ್ರಮ ಆರಂಭ... ಆಹಾ! ಅದರ ವೈಭವವನ್ನು ಅದೇನೆಂದು ವರ್ಣಿಸಲಿ? ಶ್ರೀ ಶ್ರೀ ಸೋಮಪ್ಪನವರೆಂದರೆ ಸಾಮಾನ್ಯರಲ್ಲ...ಅವರ ಶಕ್ತಿಯೂ ಪ್ರಶ್ನಾತೀತ... ಯಾರು ಯಾರಿಗೆ ಯಾವ ಯಾವುದಿಲ್ಲವೋ! ಅವರವರಿಗೆ ಅದನ್ನು ಕೊಡುವುದು ಇವರ ಕೆಲಸ....ಜನರ ಕೋರಿಕೆ ಏನೇ ಇರಲಿ, ಅರ್ಜಿ ನಮ್ಮ ನಾಯಕರ ಕೈ ಸೇರಿದರೆ ಸಾಕು, ಮರುಕ್ಷಣ ಅವರ ಬೇಡಿಕೆ ಪೂರ್ಣವಾದಂತೆಯೆ, ಸಾವಿರಾರು ಜನ . . ಲಕ್ಷಾಂತರ ಬೇಡಿಕೆಗಳು... ಈಗ ನಮ್ಮ ನಾಯಕರಿಗೆ ಕೊಟ್ಟೇ ಅಭ್ಯಾಸ...ಸೇಠ್ ಮುಂದೆ ಬಂದು ನಮಸ್ಕಾರ ಮಾಡಿದ್ರು. ಶ್ರೀ ಶ್ರೀ ಸೋಮಪ್ಪನವರ ಪಾದಮೂಲದಲ್ಲಿ ಜೋಪಾನವಾಗಿ ಒಂದು ಪೊಟ್ಟಣ ಇಟ್ಟರು.

"ಏನಿದು?"

ಶ್ರೀ ಶ್ರೀ ಸೋಮಪ್ಪನವರು ಗುಡುಗಿದರು.

"ಸ್ವಾಮಿಯವರು ಕ್ಷಮಿಸಬೇಕು. . ಇದು ಬಡವನ ಅಲ್ಪ ಕಾಣಿಕೆ. .?

ಶ್ರೀ ಶ್ರೀ ಸೋಮಪ್ಪನವರು ಆ ಪೊಟ್ಟಣ ತೆರೆದರು... ಥಳ ಥಳ ಹೊಳೆಯುವ ಎರಡು ವಜ್ರದ ಉಂಗುರಗಳು— ಒಂದೊಂದು ಉಂಗು

ರಕಮ್ಮು ಕನಿಷ್ಟ ಒಂದ್ ಹತ್ತು ಲಕ್ಷ ಆಗಬಹುದು—ಮಾನ್ಯ ಸೋಮಪ್ಪನವರು ತಲೆ ಎತ್ತಿ ಸೇಠರ ಮುಖ ನೋಡಿದರು—ಸೇಠರ ಕಣ್ಣು ವ್ಯಂಗ್ಯದ ಭಾವನೆಯಲ್ಲಿ, ಶ್ರೀ ಶ್ರೀ ಸೋಮಪ್ಪನವರ ಬೆರಳಿನತ್ತ ನಟ್ಟಿತ್ತು—ಮಾನ್ಯ ಸೋಮಪ್ಪನವರಿಗೆ ನಗು ಬಂತು—ಬೆರಳುಗಳು ಅಪ್ರಯತ್ನವಾಗಿ ಉಂಗುರ ಸವರಿತು— ಮರುಕ್ಷಣ ಒಂದು ಪ್ಯಾಕೆಟ್ ತಮ್ಮ ಜೇಬಿನಿಂದ ತೆಗೆದು, ಸೇಠರ ಕೈಯಲ್ಲಿಟ್ಟರು—

ಸೇಠ್ ಲಾಲ್‌ಚಂದ್‌ರು ಆ ಪ್ಯಾಕೆಟ್ ತೆರೆದರು— ಹಾಗೇ ಅವಕ್ಕಾಗಿ ನಿಂತರು. ತಾವು ಪ್ರಧಾನಿಗಳಿಗೆ ಕಾಣಿಕೆಯಾಗಿ ನೀಡಿದ ಉಂಗುರಕ್ಕಿಂತ ಹಲವು ಪಟ್ಟು ಬೆಲೆಬಾಳುವ ಹತ್ತು ಉಂಗುರಗಳು ಅಲ್ಲಿವೆ— ಸೇಠರ ಮುಖ ಕಪ್ಪಿಟ್ಟಿತು—ಮರುಕ್ಷಣ ಅಲ್ಲಿಂದ ತಲೆತಗ್ಗಿಸಿಕೊಂಡು ಹೊರಟರು.

ಶ್ರೀ ಶ್ರೀ ಸೋಮಪ್ಪನವರಿಗೆ, ಇತ್ತೀಚೆಗೆ ಯಾಕೋ ಗೌಡನ ನೆನಪು ತೀವ್ರವಾಗಿ ಕಾಡಲು ಮೊದಲು ಮಾಡಿತ್ತು—ಹಿಂದೆಲ್ಲಾ ಅವ್ರಿಗೆ ಗೌಡನ ಹೆಸರು ಕೇಳಿದರೆ ಸಾಕು. ಮೈ ಉರೀತಿತ್ತು— ಆದ್ರೆ. ಯಾಕೋ ಇತ್ತೀಚೆಗೆ ಅವ್ರ ನೆನಪು ತುಂಬಾ ಪ್ರಿಯವಾಗ್ತಾ ಇದೆ. ಅವ್ನ ಬಗ್ಗೆ ಅಯ್ಯೋ ಅನ್ನೋದಿಕ್ಕೆ ಶುರು ಆಗಿದೆ. ಎಂಥಾ ಗೌಡಾ! ಎಂಥಾ ಗೌಡಾ, ಆ ಗೌಡಾ! ಆಳು ನಡೆದು ಬರ್ತಿದ್ರೆ ಸಾಕು, ಎಲ್ಲಾ ಬೆನ್ನು ಬಾಗ್ಸೋರ—ಗೌಡ್ನ ಕೃಪಾ ದೃಷ್ಟಿ ಯಾರ್ಮನೆ ಮೇಲೆ ಬಿದ್ರೆ ಮುಗೀತು—ಅಂದು, ಆ ಮನೆಯಾತ ಹೊರಗೇ ಮಲಗ್ಬೇಕು—ಗಂಡೂ ಅಂದ್ರೆ ನಮ್ ಗೌಡ್ನೇ—ಭಲಾ ಗೌಡಾ! ಇದ್ರೆ ನಿನ್ನಂಗೆ ಇರ್ಬೇಕು— ಅಷ್ಟು ಪುಟ್ಟ ಕುಂದೂರಿನಲ್ಲೇ ಅವ ಅಷ್ಟು ಮಜಾ ಮಾಡ್ದ—ನಾನ್ಯಾಕೆ ಸುಮ್ನಿರಲಿ! ಈಗೇನ್ ಇಡೀ ಅಸಮಾನ್ಯ ಪುರವೆ ನಂದಲ್ವಾ! ಎಲ್ಲಾ ಹೆಣ್‌ಗಳೂ, ನಮ್ಮ ಕೈಯ್ಯಾಗಿನ್ ಹಣ್ಣ್‌ಗಳಲ್ವಾ

ಹೆಣ್ಣ್ ಬಗ್ಗೆ ಯೋಚ್ನೆ ಬರ್ತಿದ್ದಂಗೆ, ಶ್ರೀ ಶ್ರೀ ಸೋಮಪ್ಪನವರ ಗಮನ ತಮ್ ಹೆಂಡತಿ ಕಡೆ ಹೊರಳ್ತು...ಅವತ್ತು ಉಂಗುರ ಸಿಕ್ಕಿದ್

ದಿನದಿಂದ ಇಂದಿನವರೆಗೆ, ಅವ್ರನ್ ತಾವ್ ಮರೆತೆ ಬಿಟ್ಟಿದ್ನಲ್ಲಾ! ಅವ್ರು ಗೌಡ್ನ ಪಕ್ಕ ಮಲಗ್ತಿದ್ರು ಅಂತ ಅಲ್ವ? ಅದ್ಕೆ ಇರ್ಬೇಕು, ಅವ್ರ ನೆರಳ್ ಕಂಡ್ರೂ ಸಾಕು, ಸಿಟ್ಟು ಬರುತ್ತೆ...ಕಳ್‌ಮುಂಡೆ, ಹ್ಯಾಗ್ ತನ್ ಮೇಲೆ ಜೋರು ಮಾಡ್ತಿದ್ಲು. ಆ ನನ್ಮಗ ಗೌಡನ ಬೆಂಬಲ ಇದೆ ಅಂತ, ತನ್ನ ಕಾಲಕಸ ಮಾಡಿಲ್ಲಿಲ್ವಾ? ಅನುಭವಿಸ್ಲಿ ಈಗ!

ಫಕ್ಕನೆ ಅವ್ರಿಗೆ ತಮ್ಮ ಇತ್ತೀಚಿನ ರಾತ್ರಿ ಸಾಹಸಗಳ ನೆನಪಾಯ್ತು. ಈಗ ತಾನು ಜೊತೆಗ್ ಮಲಗಿದ ಹೆಣ್ಣುಗಳ ಲೆಕ್ಕ ಇದ್ಯಾ? ತಮಗೂ, ಗೌಡಂಗೂ ಏನ್ ವ್ಯತ್ಯಾಸ? ಅವ್ನ ಕೈಯಲ್ಲಿ ಕಾರುಬಾರ್ ಇದ್ದಾಗ ಅವ ಮಾಡ್ದ... ನನ್ ಕೈಯಲ್ಲಿ ಉಂಗುರ ಬಂತು..ನಾನು ಹೀಗಿದ್ದೀನಿ... ಒಂದ್ವೇಳೆ, ಈ ಉಂಗ್ರ ಕಳೆದುಹೋದ್ರೆ? ಮಾನ್ಯ ಸೋಮಪ್ಪನವರಿಗೆ ಭಯ ಆಯ್ತು—ತಕ್ಷಣ ಉಂಗುರವನ್ನ ಗಟ್ಟಿಯಾಗಿ ಹಿಡ್ಕೊಂಡ್ರು...ಸಧ್ಯ ಬೆರಳಿನಲ್ಲೆ ಇದೆ...ಮತ್ತೆ ಹೆಂಡ್ತಿ ಬಗ್ಗೆ ಯೋಚ್ನೆ ಬಂತು...ಅವ್ಳ ಬಗ್ಗೆ ಅವರಿಗೀಗ ಕ್ವಾಪ ಬರ್ಲಿಲ್ಲ...ಮಕ್ಳ ನೆನಪು ಬಂತು...ಅವ್ರೆಲ್ಲಾ ಈಗ ಇಲ್ಲೇ ಇದ್ದಾರೆ...ಆದ್ರೆ ಅವ್ರುಗಳ್ ಮುಖಾ ನೋಡಿ ಎಷ್ಟೊಂದ್ ದಿನ ಆದ್ವು? ಅವ್ಳು ಅಲ್ಲಿ ಮಕ್ಳ ಜೊತೆ ಮಲೀಕ್ಕೊತ್ತಾಳೆ..ನಾನಿಲ್ಲಿ, ಈ ಆಫೀಸ್ ರೂಮಿನ ಸೋಫಾ ಮೇಲೆ...ಶ್ರೀ ಶ್ರೀ ಸೋಮಪ್ಪನವರಿಗೆ ಏನು ಅನ್ನಿಸಿತೋ? ಮಂಚದಿಂದ ಮೇಲೆ ಎದ್ರು..ನಿಧಾನವಾಗಿ ಬಾಗಿಲು ತೆರೆದು ಪಕ್ಕದ್ ಕೋಣೆಗೆ ಹೋದ್ರು..ಬಾಗ್ಲ ಸಂದೀಲಿ ಕಣ್ಣಿಟ್ಟು ಒಳ್ಗೆ ನೋಡಿದ್ರು..ಅಲ್ಲಿ ಅವ್ಳು ಮಕ್ಳ ಜೊತೇಲಿ ಮಲಗವ್ಳೆ, ಕಣ್ಣುಜ್ಜಿಕೊಂಡು ಸರಿಯಾಗಿ ನೋಡಿದ್ರು..ಉಹುಂ ಮಲಗಿಲ್ಲ..ಆ ಕಡೆ ಮುಖಾ ತಿರುಗಿ ಸ್ಕೊಂಡವ್ಳೆ, ಕುಸುಕುಸು ಧ್ವನಿ..ಅಂದ್ರೆ, ಅಳ್ತಾ ಇದ್ದಾಳೆ..ನಿಧಾನವಾಗಿ ಬಾಗಿಲು ತಟ್ಟಿದ್ರು—ಪಕ್ಕನೆ ಈ ಬದಿ ತಿರುಗಿದ್ಳು...ಕಣ್ಣಲ್ಲಿ ನೀರು ತುಂಬಿ ಕೆಂಪಾಗಿರೋದು ಕಾಣ್ತಿದೆ—ನಿಧಾನವಾಗಿ ಬಾಗಿಲು ತೆರೆದ್ಳು—ಅವ್ಳಿಗೆ ಆಶ್ಚರ್ಯ— ಗಂಡ ಬಂದವ್ನೆ—ಬಾಳಾ ದಿನದ್ ನಂತ್ರ— ಮಾನ್ಯ ಸೋಮಪ್ಪನವರು ಪ್ರೀತಿಯಿಂದ ಅವ್ಳ ಬೆನ್ನು ಸವರಿದ್ರು—ಅವ್ಳು ಹಾಗೆ ನಾಯಕ್ರನ್ನ ತಬ್ಕೊಂಡ್ಳು, ಹಾಗೆ ಎತ್ಕೊಂಡ್ ಮಲಗೋಕೋಣೆಗ್

ಬಂದ್ರು—ಬಾಗ್ಲು ಹಾಕಿದ್ರು— ಅವ್ರು ಹೆಂಡ್ತಿಗಂತೂ ಸಂಭ್ರಮವೇ ಸಂಭ್ರಮ—ಆತುರದಿಂದ ತಬ್ಕೊಂಡ್ರು. ಅವ್ರ ತುಟಿ ಹತ್ರ ತುಟಿತಂದ್ರು ಗೌಡ್ರ ಎಂಜಲು ಕುಡಿದಂಗಾತು. ಹಾವು ಮೆಟ್ಟಿದೋರಂಗೆ ದೂರ ಸರಿದ್ರು— ಹೆಣ್ಣು ಕೆನ್ನೆ ಮೇಲೆ, ತುಟಿ ಮೇಲೆ, ಮೈಯ ಇಂಚು ಇಂಚಿನಲ್ಲೂ ಗೌಡ್ರು ಕುಂತವ್ರೆ. ಕಣ್ಣು ಕೆಂಪಾಗ್ತು—ಹುಬ್ಬು ಸಡ್ಲಾತು—ಒರಟಾಗಿ ಅವ್ಳನ್ನ ಬಾಗಿಲ್ ಕಡೆ ತಳ್ಳಿದ್ರು—

ಬೆಳಿಗ್ಗೆ ಶ್ರೀ ಶ್ರೀ ಸೋಮಪ್ಪನವರು ಎದ್ದಾಗ ಹತ್ತು ಗಂಟೆ ದಾಟಿತ್ತು— ವಿಸ್ಕಿ ಮತ್ತು ಇಳಿದಂದಿರ್ಲಿಲ್ಲಾ! ತೂರಾಡ್ತಾ ಹೊರಬಂದ್ರು ಆಳುಗಳೆಲ್ಲಾ ಗರ ಬಡಿದವರಂತೆ ಗುಂಪು ಗುಂಪಾಗಿ ನಿಂತವ್ರೆ. ಶ್ರೀ ಶ್ರೀ ಸೋಮಪ್ಪನವರಿಗೆ ಸಿಟ್ಟು ಬಂತು. ಇದೇನ್ ಇವರಪ್ಪನ್ ಛತ್ರಾನಾ? ಆರಾಮವಾಗಿ ನಿಂತ್ಕೊಂಡವ್ರಲ್ಲಾ— ಜೋರು ಮಾಡ್ಬೇಕು ಅಂತ ಬಾಯಿ ತೆರೆದರು—

ಬಾಗಿಲು ತೆರೆದಿದ್ದ ಎದುರು ಕೋಣೆಯಲ್ಲಿ ಅವ್ರ ಹೆಂಡತಿ ಶವ ಫ್ಯಾನ್‌ನ ಕೊಂಡೀಲಿ ತೂಗ್ತಾ ಇತ್ತು—

ನಂಗೆ ಗೊತ್ತು ಓದುಗ! ನಿಂಗೀಗ ಬೇಸರ ಆಗ್ತಿದೆ— ಆದ್ರೆ, ನಾವೇನ್ಮಾಡ್ಲಿ— ನಿನ್ಹಾಂಗೆ ನಾನೂ ಅದ್ಕೊಂಡಿದ್ದೆ— "ಶ್ರೀ ಶ್ರೀ ಸೋಮಪ್ಪನವರು ತಮ್ ಹೆಂಡತಿ ಜೊತೆ ಸುಖವಾಗಿ, ಸಂತೋಷವಾಗಿ, ಆ ಒಂದೇ ರಾತ್ರಿಯಲ್ಲ, ಅಂತಹಾ ಸಾವಿರಾರು ರಾತ್ರಿಗಳನ್ನ ಕಳೆದರು— ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳೊಂದಿಗೆ ಸಂತೋಷವಾಗಿ ಕಾಲ ಕಳೆದರು ಅಂತ" ಆದ್ರೆ, ನಾವು ಅದ್ಕೊಂಡಂಗೆ ಆಗ್ದೇ ಇರೋದೆ ಬದುಕಿನ ವೈಶಿಷ್ಟ್ಯ, ಅನಿಶ್ಚಿತ್ತೆ—ಬದುಕಿನಲ್ಲಿ ಆಗೋದನ್ನೆಲ್ಲಾ ನಾವು ಊಹಿಸೋದಿಕ್ಕಾಗೋದಿಲ್ಲ ಊಹಿಸೋದೆಲ್ಲಾ ಬದುಕಿನಲ್ಲಿ ನಡೆಯೋದಿಲ್ಲ— ಆದ್ರಿಂದ ವಿವೇಕಿ ಮನುಷ್ಯ ಬದುಕನ್ನ, ಅದು ಬಂದ ಹಾಂಗೆ. ಅದರ ಸವಾಲುಗಳ್ನ ಎದುರಿಸ್ತಾ ಹೋಗ್ತಾನೆ, ಉತ್ತರಿಸುತ್ತಾ ಹೋಗ್ತಾನೆ— ಅಲ್ವಾ! ನಿನ್ ಹಾಗೇ ನಂಗೂ ಶ್ರೀಶ್ರೀ ಸೋಮಪ್ಪನವರ ಧರ್ಮಪತ್ನಿಯವರ ಅನಿರೀಕ್ಷಿತ

ಮರಣ ನೋವು ಎಂಟು ಮಾಡ್ತು-ಆದ್ರೆ ನಮ್ಗೆ ಏನು ಅನ್ನಿಸ್ತು ಮುಖ್ಯ ಅಲ್ಲ-ಅಲ್ಲಿ ಏನಾಯ್ತು, ಅದು ಮುಖ್ಯ, ಆದ್ರಿಂದ ಆದದ್ದನ್ ನೋಡೋಣ ನಡೆ.

ಶ್ರೀ ಶ್ರೀ ಸೋಮಪ್ಪನವರು ಮಲಗಿಸ್ತಾ ಇದ್ದ ತಮ್ ಹೆಣ್ತಿ ಶವವನ್ನ ಹಾಗೇ ನೋಡ್ತಾ ನಿಲ್ಕಂಡ್ರು— ಒಂದು ಮಾತನ್ನೂ ಆಡಲಿಲ್ಲ—ಪ್ರಧಾನಿಗಳು ಬಂದ ತಕ್ಷಣ ಅಲ್ಲಿ ಸಂಪೂರ್ಣ ಮೌನ ಆವರಿಸಿಕೊಂಡಿತು-ಐದು ನಿಮಿಷ ಆಯ್ತು—ಹತ್ತು ನಿಮಿಷ ಆಯ್ತು—ಶ್ರೀ ಶ್ರೀ ಸೋಮಪ್ಪನವರು ಒಮ್ಮೆ ತಲೆ ಕೊಡವಿಕೊಂಡರು—ಅಷ್ಟರಲ್ಲಿ ಹೆಣ ಕೆಳಗೆ ಇಳ್ಸಿದ್ದಾಗಿತ್ತು—ನಿಧಾನವಾಗಿ ಹತ್ರ ಬಂದ್ರು. ಬಾಗಿ ಹಣೆ ಮೇಲೆ ಮುತ್ತಿಟ್ರು—ಅಳು ಬರ್ಲಿಲ್ಲ. ಎದ್ದರು—ಸುತ್ತ ಇದ್ದವರಿಗೆ ಶವ ಅಲ್ಲಿಂದ ತೆಗೆಯೋದಿಕ್ಕೆ ಸನ್ನೆ ಮಾಡಿದ್ರು—ನಂತರ ಅಲ್ಲಿಂದ ಎದ್ದು ನಿಧಾನವಾಗಿ ತಮ್ ಆಫೀಸ್ ರೂಂ ಹೊಕ್ಕರು. .

ಅಂದು ಬೆಳಗ್ಗೆ ಮುಚ್ಚಿದ ಆ ಬಾಗಿಲುಗಳು ಸಂಜೆಯವರೆಗೂ ತೆರೆಯಲಿಲ್ಲ—

ಮುಚ್ಚಿದ ಬಾಗಿಲ ಮುಂದೆ ಸೂಜಿ ಬಿದ್ದರೂ ಕೇಳಿಸುವ ಮೌನ—ಬಾಗಿಲನ್ನು ತಟ್ಟುವ ಧೈರ್ಯ ಯಾರಲ್ಲಿಯೂ ಇಲ್ಲ— ಹೇಗಿದ್ದರೆ ಹೇಗೊ ಎಂಬ ದಿಗಿಲು— ನಿಮಿಷಗಳು ಉರುಳುತ್ತಿವೆ— ಕಾಲ ಸವೆಯುತ್ತಿದೆ—ಗಂಟೆಗಳು ಚಲಿಸುತ್ತಿವೆ—

ಇದೊ ಇಲ್ಲಿ, ಮುಚ್ಚಿದ ಬಾಗಿಲುಗಳ ಆ ಕೋಣೆಯ ಒಳಗೆ— ಶ್ರೀ ಶ್ರೀ ಸೋಮಪ್ಪನವರು ಆರಾಮಾಸನದಲ್ಲಿ ಪವಡಿಸಿದ್ದಾರೆ— ಶೂನ್ಯವಾದ ದೃಷ್ಟಿಯನ್ನ ಮಾಳಿಗೆಯತ್ತ ಬೀರುತ್ತಿದ್ದಾರೆ—ಗಳಿಗೆ ಗಳಿಗೆಗೂ ಉಂಗುರ ಇರುವ ಬೆರಳನ್ನು ನೋಡುತ್ತಿದ್ದಾರೆ—ಅಷ್ಟನ್ನು ಹೊರತು ಪಡಿಸಿ, ಮತ್ತೆ ಯಾವ ಚಲನವಲನವೂ ಕಂಡುಬರುತ್ತಿಲ್ಲ ಅವರು ಪವಡಿಸಿರುವ

ರೀತಿಯಲ್ಲೇ ಹೇಳಬಹುದು— ಅವರ ದೇಹ ಮಾತ್ರ ಅಲ್ಲಿದೆ— ಆದರೆ ಮನಸ್ಸು—? ಅದನ್ನು ಹಿಡಿವವರಾರು? ಬೇಕೆನಿಸಿದಾಗ, ದೇಹದೊಡನೆ ಅವಿನಾಭಾವಿಯಾಗುವ ಈ ಮನಸ್ಸು ತನ್ನಿಚ್ಛೆ ಬಂದಂತೆ, ಅದೇ ದೇಹವನ್ನು ಅನಾಥಗೊಳಿಸಿ, ಸ್ವತಂತ್ರವಾಗಲೂ ಬಲ್ಲದಲ್ಲವೆ?

ಎತ್ತಲೂ ನೋಡುತ್ತಾ, ಕುಳಿತ್ತಿದ್ದ ಮಾನ್ಯ ಸೋಮಪ್ಪನವರು ಒಮ್ಮೆ ಮೈ ಮುದುಡಿ, ಕೈ ತಿಕ್ಕಿ ಕುಳಿತ್ತಿದ್ದ ಕ್ರಮ ಬದಲಿಸಿದರು—ಕಣ್ಣು ತೆರೆದರೂ ಮುಚ್ಚಿದರೂ ಅವರಿಗೀಗ ಕಾಣುತ್ತಿರುವುದೊಂದೆ—ಫ್ಯಾನ್ ಕೊಂಡಿಗೆ ತೂಗಿ ಬಿದ್ದಿರುವ ತಮ್ಮ ಪತ್ನಿಯ ಮುಖ— ಅದೇ ಮುಖವನ್ನು ತಮ್ಮ ಬೊಗಸೆಯಲ್ಲಿ ಹಿಡಿದು, ಅದೆಷ್ಟು ಬಾರಿ ಮುದ್ದಿಸಿರಲಿಲ್ಲ—ಗುಂಗಿನಲ್ಲಿ ಮೈ ಮರೆತು ತಮ್ಮ ಬದುಕಿನ ಸಾಫಲ್ಯವನ್ನು ಆ ಹೆಣ್ಣಿನಲ್ಲಿ ಕಂಡುಕೊಂಡಿರಲಿಲ್ಲ! ತಮ್ಮ ಯೌವ್ವನದ ಪ್ರಾರಂಭಿಕ ದಿನಗಳ ನೆನಪಾಗತೊಡಗಿತು—ಅದೆಷ್ಟು ಸಲ, ಹಿರಿಯರ ಗೆಳೆಯರ ಕಣ್ತಪ್ಪಿಸಿ, ತನ್ನಿಯಳೊಂದಿಗೆ ಕಾಡುವ ಎಡೆಗಳ ಉದ್ದಗಲವನ್ನ ಅಲೆದಿರಲಿಲ್ಲ ಅಂದಿನ ದಿನಗಳಾದರೂ ಎಂತಹವು !ಬೆಳಗಿನಿಂದ ಸಂಜೆವರೆವಿಗೂ ಮೈ ಮುರಿತದ ದುಡಿತ—ಹಾಗಾದಾಗ, ಮಾತ್ರಾ ಒಂದು ಹೊತ್ತಿನ ಗಂಜಿಗೆ ದಾರಿ ಎಷ್ಟೋ ದಿನ ಆ ಗಂಜಿಯೂ ಇಲ್ಲವೆ, ಬರಿಯ ನೀರಿನಲ್ಲಿ ಹೊಟ್ಟೆ ತುಂಬಿಸಿ ಕೊಂಡಿರಲಿಲ್ಲವೇ? ಮಾನ ಮುಚ್ಚಲೇ ಸಾಹಸ ಪಡುತ್ತಿದ್ದ ತುಂಡು ಅರಿವೆ...ಗೌರಿ ತನ್ನ ಹೆಂಡತಿಯು ಬಾಳಿನಲ್ಲಿ ಪ್ರವೇಶಿಸಿದ್ದು ತಮ ದಾಂಪತ್ಯದ ಕಪ್ಪು ಚುಕ್ಕೆ...ಆದರೆ, ಬೆಂದೂರಿನ ಆ ವಾತಾವರಣದಲ್ಲಿ, ತಮಗೆ ಅದೇ ಸಹಜ, ಎನಿಸುವ ಸ್ಥಿತಿ ಇರಲಿಲ್ಲವೆ? ಮಾನ್ಯ ಸೋಮಪ್ಪನವರನ್ನ ಭೂತಕಾಲದ ನೆನಪುಗಳು ಆವರಿಸಿಕೊಳ್ಳುತ್ತಿದ್ದಂತೆಯೇ, ವರ್ತಮಾನದ ಬದುಕು ಆ ಬದುಕಿನಲ್ಲಿರುವ ಅನಾಕರ್ಷಕ ಸ್ಥಿತಿಯನ್ನು, ಗತಕಾಲದ ಹೋರಾಟದ ಬದುಕಿನ ಸ್ಥಿತಿಗೆ ಹೋಲಿಸಿ ನೋಡಬೇಕಾದ್ದು ಅಗತ್ಯ ಎಂದೆನ್ನಿಸಿತು...ಹಿಂದೆಲ್ಲಾ ಸಾಧ್ಯವಾಗುತ್ತಿದ್ದ ಆ ಭಾವನಾತ್ಮಕ ಬದುಕು, ಆ ಉನ್ಮತ್ತ ಕ್ಷಣಗಳು, ಈಗ ಸಾಧ್ಯವೆ ಇಲ್ಲವೇನೂ ಎಂದೆನ್ನಿಸುವಂತೆ ಆಗಿದೆ...ಅಂದಿನ ದಿನಗಳಲ್ಲಿ ಬದುಕು ಎಂಬುದು ಒಂದು ಸಂಪೂರ್ಣ ಒಳ

ಗೊಂಡ ಸ್ಥಿತಿ...ಆದರೀಗ ಶ್ರೀ ಶ್ರೀ ಸೋಮಪ್ಪನವರು ಅನುದ್ದೇಶ ಪೂರ್ವಕವಾಗಿ ತಮ್ಮ ಬೆರಳಲ್ಲಿಯ ಉಂಗುರದತ್ತ ಒಮ್ಮೆ ಕಣ್ಣು ಹಾಯಿಸಿದರು.....

ಒಮ್ಮೆ, ಇನ್ನೊಮ್ಮೆ, ಮತ್ತೊಮ್ಮೆ, ತಮ್ಮ ಕಣ್ಣುಗಳನ್ನ ಅಗಲಿಸಿ ನೋಡಿದರು...ಅದೇ ಉಂಗುರ ನಡುವೆ ಗೌಡ್ನ ಮುಖ. ದಪ್ಪ ದಪ್ಪ ದಿರಿಜಾ ಮೀಸೆ, ಕೆಂಪಾನ್ ಕಣ್ಣು, ಕಟಕಟಾಂತಿರೊ ಪಾಚಿಗಟ್ಟಿದ ಹಲ್ಲುಗಳು ಹೊಟ್ಟೆಯಲ್ಲಿ ಬೆಂಕಿ ಬಿದ್ದಂಗಾತು...ಇಷ್ಟು ದಿನವೂ ಆ ಉಂಗುರ ನೋಡುತ್ತಿದ್ದರೆ ಉಂಟಾಗುತ್ತಿದ್ದ ಹೆಮ್ಮೆಯ ಭಾವ ಅವರ ಮನಸ್ಸನ್ನು ಆವರಿಸಲಿಲ್ಲ. ಬದಲಿಗೆ, ಶೂನ್ಯ, ಬರೀ ಶೂನ್ಯವಾದ ಅನಿಸಿಕೆ...ಆ ಉಂಗುರವನ್ನು ನೋಡುತ್ತಲೆ ಇದ್ದರು... ತಮ್ಮ ಮುಖವೆ ಅಲ್ಲಿ ಕಂಡಂಗಾತು... ಆ ಉಂಗುರದ ಮೇಲೆ ತಾವೆಷ್ಟು ಅವಲಂಬಿತರು? ಆ ಉಂಗುರ ಇಲ್ಲದೆ ಇದ್ದರೆ, ತಮ್ಮ ಅಸ್ತಿತ್ವಕ್ಕೆ ಅರ್ಥ ಏನು? ಇದೇ ಮೊದಲ ಬಾರಿಗೆ ಮಾನ್ಯ ಸೋಮಪ್ಪನವರು ಆ ಉಂಗುರವನ್ನೊಮ್ಮೆ ನೋಡಿದರು, ತೀಕ್ಷ್ಣವಾಗಿ, ಕಣ್ಣುಗಳನ್ನು ಅಗಲಿಸಿಕೊಂಡು...ತಾವೆಲ್ಲೊ, ಅದರೊಳಗೆ, ಆ ಭೂತದ ಹೊಟ್ಟೆಯಲ್ಲಿ ಕರದಿ ಹೋಗಿದ್ದೇನೆ, ಅಂತ ಅನ್ನಿಸತೊಡಗಿತು....ಮೈ ಬಿಸಿ ಆಗತೊಡಗಿತು.. ತೋಳುಗಳು ಸ್ಫುರಣಗೊಂಡವು...... ಮುಷ್ಟಿ ಬಿಗಿಯುತೊಡಗಿತು... ಭೂತದ ಹೊಟ್ಟೆಯು ಕೆಳಕ್ಕೆ, ತಳಕ್ಕೆ, ಎತ್ತಿ ಎತ್ತಿ ಭಾರಿಸತೊಡಗಿದರು...ಭೂತ ಆಶ್ಚರ್ಯ ಚಕಿತವಾಗಿ ಇವರನ್ನ ನೋಡುತ್ತಿತ್ತು...ಇವರ ಒಂದೊಂದು ಪೆಟ್ಟಿಗೂ, ಅದರ ಮೈ ಅದುರತೊಡಗಿತು... ಒಂದು... ಎರಡು...ಮೂರು... ನಾಲ್ಕು....ಠಳಕ್ ಅಂತ ಭೂತ ವಾಂತಿ ಮಾಡಿಕೊಂಡಿತು.. ಆ ವಾಂತಿಯ ನಡುವೆ, ಉದುರಿದ ಅಸಂಖ್ಯ ಮೂಳೆಗಳ ರಾಶಿಗಳ ನಡುವೆ, ಅರೆಬರೆಯಾದಿದ್ದ ಮನುಷ್ಯಾಕಾರ...ಕ್ರಮೇಣ ಆ ಆಕಾರ ಮೈ ತುಂಬಿಕೊಳ್ತು.. ತನ್ನದೆ ಕಾಲುಗಳ ಮೇಲೆ ನಿತ್ಕಂಡು, ತೋಳುಗಳನ್ನು ಎತ್ತಿ, ಮೀಸೆ ತಿರುವುತ್ತಾ, ಭೂತಕ್ಕೆ ಸಡ್ಡು ಹೊಡಿಯಿತು.. ಭೂತ ನೋಡುತ್ತಿತ್ತು—ಸುಮ್ಮನೆ ನೋಡುತ್ತಲೇ

ಇತ್ತು. ಆದರೆ ಕಣ್ಣುಗಳಲ್ಲೀಗ ದಿಗ್ಭ್ರಾಂತಿ... ಮಾನ್ಯ ಸೋಮಪ್ಪನವರು ಆ ಮನುಷ್ಯಾಕಾರವನ್ನೊಮ್ಮೆ ನೋಡಿದರು.. ಆಶ್ಚರ್ಯವಾಯಿತು ಕಣ್ಣಗಲಿಸಿ ನೋಡಿದರು.. ವಾಮನಾಕಾರದ ಭೂತದ ಮುಂದೆ ಬೆಳೆದು ನಿಂತ ತ್ರಿವಿಕ್ರಮಾಕಾರದ ಸೋಮ್ಯಾ—ಭೂವ್ಯಾಕಾಶಗಳನ್ನ ಮೀರಿ ಬೆಳೆದ ಸೋಮ್ಯಾ—ಗೌಡನ್ ಮುಂದೆ ಬೆನ್ನು ಬಾಗಿಸಿ, ಬಾಗಿಸಿ, ಬಾಗಿಸಿಯೇ ಬದುಕುತ್ತಿದ್ದ ಸೋಮ್ಯಾನಿಗೂ. ಇವನಿಗೂ ಯಾವ ಸಂಬಂಧವೂ ಇದ್ದಂತೆ ಕಾಣುತ್ತಿಲ್ಲ—ಮುಖದಲ್ಲಿ ಹೊಸ ಬೆಳಕಿದೆ—ಮನದಲ್ಲಿ ತನ್ನತನದ ನಡುವೆ ಮೂಡಿಬಂದ ಆತ್ಮವಿಶ್ವಾಸವಿದೆ. ರಟ್ಟೆಗಳಲ್ಲಿ ಬಲವಿದೆ—ಇವೆಲ್ಲಕ್ಕಿಂತ ಮಿಗಿಲಾಗಿ 'ನಾಳಿನ' ಬಗ್ಗೆ ಬತ್ತಲಾರದ ನಂಬಿಕೆ ಇದೆ.

ಇಷ್ಟು ದಿನಗಳಿಂದ ತಾವು 'ಗಳಿಸಿಕೊಂಡಿದ್ದು' ಹಾಗೂ 'ಕಳೆದು ಕೊಂಡಿದ್ದರ' ಅಂತರವೀಗ ಮಾನ್ಯ ಸೋಮಪ್ಪನವರಿಗೆ ಸ್ಪಷ್ಟವಾಗಿ ಅರಿವಿಗೆ ಬಂದಿತು. ನಿಲುವುಗನ್ನಡಿಯು ಮುಂದೆ ನಿಂತರು.. ಹಿಂದೆಂದೂ ಇಲ್ಲದಷ್ಟು ಪ್ರೀತಿಯಿಂದ ತಮ್ಮನ್ನು ತಾವೆ ಕನ್ನಡಿಯಲ್ಲಿ ನೋಡಿಕೊಳ್ಳುತ್ತಾ ಮೈಮರೆತರು... ಗುರುತರಿಯದ ಯಾವುದೋ 'ಭಾವ' ಅವರ ಮನಸ್ಸಿನಲ್ಲಿ ಅಸ್ಪಷ್ಟಾಕಾರ ತಾಳಿಕೊಳ್ಳಲಾರಂಭಿಸಿತು...

ಹಲವಾರು ದಿನಗಳಿಂದಲೂ ಕುದಿಯುತ್ತಿದ್ದ ಮಾನ್ಯ ಸೋಮಪ್ಪನವರ ಮನಸ್ಸು ಕ್ರಮೇಣ ಶಾಂತವಾಗ ತೊಡಗಿತು... ತನ್ನೆಲ್ಲ ಹೊರೆಗಳನ್ನೂ ಕಳಚಿಕೊಂಡ ಅನುಭವ ಅವರಿಗೆ ಆಗ ತೊಡಗಿತು... ಇದ್ದಕ್ಕಿದ್ದ ಹಾಗೆಯೇ, ತನ್ನಂಥ ಏನೂ ಘಟಿಸಬಾರದ್ದು, ಘಟಿಸುತ್ತಿದೆ ಎಂದೆನ್ನಿಸಿ ಒಮ್ಮೆ ಮೈ ನಡುಗಿತು— ಒಂದು ಕ್ಷಣ ಅಷ್ಟೇ... ಮರುಕ್ಷಣ ನಿರ್ಭಾವುಕರಂತೆ ಶ್ರೀ ಶ್ರೀ ಸೋಮಪ್ಪನವರು ಕಿಟಕಿಯಿಂದ ಹೊರಗೆ ದೃಷ್ಟಿ ಹಾಯಿಸಿದರು...

ಮಧ್ಯರಾತ್ರಿ ಮೀರಿದೆ... ಹುಣ್ಣಿಮೆ ಚಂದಿರ ಆಕಾಶದಲ್ಲಿ ತನ್ನ ಶೀತಲವಾದ ಬೆಳಕನ್ನ ಬೀರುತ್ತಿದ್ದಾನೆ— ಸ್ವಾತಂತ್ರ್ಯದ ಗಾಳಿ ಬೀಸ ತೊಡಗಿದೆ... ನಿಧಾನವಾಗಿ ಶ್ರೀ ಶ್ರೀ ಸೋಮಪ್ಪನವರು ಕೋಣೆಯಿಂದ ಹೊರಬಂದರು... ಅಪ್ರಯತ್ನವಾಗಿ ಅವರ ಕಾಲುಗಳು ಮಕ್ಕಳು ಮಲಗಿದ್ದ ಕೋಣೆಯತ್ತ ಚಲಿಸಿತು...

ಆ ನಡುರಾತ್ರಿಯಲ್ಲಿ ದೂರದಲ್ಲಿ ಕೆಲವು ಮಾನವಾಕೃತಿಗಳು ಚಲಿಸುತ್ತಿವೆ... ಸೂಕ್ಷ್ಮವಾಗಿ ನೋಡಿದರೆ ಒಬ್ಬ ಹಿರಿಯ ವ್ಯಕ್ತಿ... ಹೆಗಲ ಮೇಲೆ ಸುಮಾರು ಐದು ವರ್ಷದ ಮಗು ಮಲಗಿದೆ— ಜೊತೆಯಲ್ಲಿ ಸುಮಾರು ಒಂಭತ್ತು ವರ್ಷದ ಹುಡುಗಿ, ಅವಳ ಸೊಂಟದ ಮೇಲೊಂದು... ಜೊತೆಗೆ ಸುಮಾರು 7–8 ವರ್ಷ ಪ್ರಾಯದ ಇಬ್ಬರು ಗಂಡು ಮಕ್ಕಳು... ಮಾತಿಲ್ಲದೆ ಚಲಿಸುತ್ತಿವೆ ದೂರ— ದೂರ... ದೂರ... ದೂರ...

ಕೆರೆಯ ಬದಿ ನಡೆಯುತ್ತಿದ್ದ ಸೋಮಪ್ಪ ಒಮ್ಮೆ ನಿಂತ. ಅವನನ್ನ ಹಿಂಬಾಲಿಸುತ್ತಿದ್ದ ಮಕ್ಕಳೂ ಸಹ... ನಡು ಬೆರಳಿನಲ್ಲಿದ್ದ ಉಂಗುರವನ್ನೊಮ್ಮೆ ದೃಷ್ಟಿಸಿದ— ಒಂದು ಕ್ಷಣ ಮನಸ್ಸು ಚಂಚಲವಾಯ್ತು... ಮರುಕ್ಷಣ, ಎದೆ ಢವಢವಗುಟ್ಟುತ್ತಿರಲು, ಆ ಉಂಗುರವನ್ನೊಮ್ಮೆ ಬೆರಳಿನಿಂದ ತೆಗೆದ... ಕ್ಷಣದಲ್ಲಿ ಕೆರೆಯಲ್ಲಿ ಸಣ್ಣ ಶಬ್ದ.... ಮರುಕ್ಷಣದಲ್ಲಿ ಕೆರೆಯ ನೀರಿನಲ್ಲಿ ವೃತ್ತಾಕಾರದ ನೀರಿನ ಅಲೆಗಳು...

"ಅಪ್ಪಾ! ಅದೇನದು? ನೀನು ಎಸೆದದ್ದು?" ಪುಟ್ಟಿ ಕೇಳಿದಳು.

"ಏನಿಲ್ಲ ಮಗು, ನಮ್ ಗ್ರಾಚಾರ! ನಡಿ ಓಗಾನ"

ಮಗಳ ಬೆನ್ನು ನೇವರಿಸುತ್ತಾ ಸೋಮಣ್ಣ ಮುನ್ನಡೆದ. ಪಾಪು ಚಟಾಕು, ಅರೆ ಚಟಾಕುಗಳೂ, ಅವನನ್ನ ಹಿಂಬಾಲಿಸಿದವು... ನಾಳಿನ ಬದುಕಿನ ಅನಂತ ಹೋರಾಟಕ್ಕೆ ಅಭಿಮುಖವಾಗಿ ಮುನ್ನಡೆದ ಸೋಮಣ್ಣನ ಆ ಒಂದೊಂದು ಹೆಜ್ಜೆಗಳೂ, ಭವಿಷ್ಯದ ಬಗೆಗಿನ ಅವನ ಅಪರಿಮಿತ ವಿಶ್ವಾಸಕ್ಕೆ ಸಾಕ್ಷಿ ಹೇಳುತ್ತಿದ್ದವು...

ಬದುಕಿನ ತಮಾಷೆಯು ಇದಲ್ಲವೆ ಓದುಗ! ಇದನ್ನು ಕುರಿತು ನಾನೇನು ಹೇಳಲಿ? ಮತ್ತೊಮ್ಮೆ ಭೇಟಿಯಾಗೋಣ. ಪ್ರೀತಿಯಿರಲಿ.

ನಿನ್ನ ಪ್ರೀತಿಯ ಲೇಖಕ,





ಮೂಲಭೂತವಾಗಿ ಪ್ರತಿಯೊಬ್ಬನ ಮನಸ್ಸಿನಲ್ಲೂ ಸುಂದರವಾದ ಕನಸುಗಳಿರುತ್ತವೆ, ಬಯಕೆಗಳಿರುತ್ತವೆ. ಈ ಕನಸು ಬಯಕೆಗಳ ತುಡಿತಗಳು ನಮ್ಮ ನಾಡಿ ಮಿಡಿತವಾದಾಗ ನಾವು ವಾಸ್ತವದ ಕಟು ಸತ್ಯಗಳ ನಡುವೆಯೂ ಎತ್ತರಕ್ಕೆ ಬೆಳೆಯುವುದು ಸಾಧ್ಯವಿದೆ. ಇದು ಅಸಾಧ್ಯವಾದವರು ಮನಸ್ಸಿನೊಳಗಷ್ಟೇ ಸೋಮಪ್ಪನಂತಾಗಿ ಬದುಕಿನೊಂದಿಗೆ ರಾಜಿಯಾಗಿಸಿಕೊಂಡು ಅಗ್ಗಿಷ್ಟಿಕೆಯಾಗುತ್ತಾರೆ.

ಗೌಡನ ದಬ್ಬಾಳಿಕೆ ತನ್ನ ಪರಿಸರ, ಮನೆ, ಹೆಂಡತಿಯ ಮೇಲೂ ನಡೆದರೂ, ತಿಕ ಮುಚ್ಚಿಕೊಂಡು ನಿಂತಿರುವ ಸೋಮಪ್ಪನಿಗೆ ರಟ್ಟೆಯ ಬಲವೇನೂ ಕಡಿಮೆಯಿಲ್ಲ. ಬಹಳಷ್ಟು ಸಲ ನಾವೆಲ್ಲ ಒಂದು ಕ್ಷಣವಾದರೂ ಸೋಮಪ್ಪನಾಗಿ, ಕನಸಿನ ಮೊಟ್ಟೆಯೊಳಗೆ ಸುಖವಾಗಿದ್ದು ವಾಸ್ತವಕ್ಕೆ ಬಂದಾಗ ರಕ್ತಬೀಜಾಸುರರ, ಗುಳ್ಳೆನರಿಗಳ ದೌರ್ಜನ್ಯಕ್ಕೆ, ತೆವಲುಗಳಿಗಾಗಿಯೇ ಬದುಕಿದ್ದೇವೇನೋ ಎನ್ನುವ ಸಂಶಯದ ಭೂತ ಸತ್ಯಾಸತ್ಯಗಳ ಕನಸು ವಾಸ್ತವಗಳ, ಅನ್ಯಾಯಂ ನ್ಯಾಯಗಳ, ತಿಕ್ಕಾಟದಿಂದ ಉಂಟಾದರೂ ನಮ್ಮ ಆಶಯಗಳನ್ನು ಪೂರೈಸಿದಂತೆ ಅನಿಸುವ ಪಲಾಯನವಾದಿಯ ಕನಸಂ ಉಂಟಲ್ಲ ಅದರ ನಂತರದ ಬದುಕು ಛೇ ಯಾರಿಗೂ ಬೇಡ ಸ್ವಾಮಿ ಎನ್ನುವ ನಮ್ಮ ಮನದೊಳಗಿನ ಮನಸಿನ ಸತ್ಯವನ್ನು ಶಬ್ದದಲ್ಲಿ ಹಿಡಿದಿಟ್ಟ ಎಸ್. ಓ. ಅಜಿತ್‌ಪ್ರಸಾದರ ಪ್ರಯತ್ನವನ್ನು ಮೆಚ್ಚುವಲ್ಲಿ ನಮಗ್ಯಾಕೆ ಹೊಟ್ಟೆಯುರಿ. ಅಜಿತ್ ಅವರ ಅಭಿವ್ಯಕ್ತಿ, ವಿಷಯದ ಗಟ್ಟಿತನದಿಂದಾಗಿಯೇ ಅಲ್ಲವೇ ನಾವೆಲ್ಲ 'ಉಂಗುರದ ಗುಲಾಮನನ್ನು' ಮೆಚ್ಚುವುದು.